

ಕರ್ನಾಟಕ ಸರ್ಕಾರ

# ಸಿರಿ ಕನ್ನಡ

## ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕ






## ಹತ್ತನೆಯ ತರಗತಿ

## ೨೦೧೫

**ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)**

ನಂ.೪, ೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ

ಮೂರನೆಯ ಹಂತ, ಬೆಂಗಳೂರು – ೫೬೦ ೦೮೫

# ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು**

**ಡಾ. ಸಿ.ಎಸ್. ರಾಮಚಂದ್ರ,** ಪ್ರಾಧ್ಯಾಪಕ ಮತ್ತು ಮುಖ್ಯಸ್ಥ, ಭಾಷಾವಿಜ್ಞಾನ ವಿಭಾಗ. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-೦೬

**ಪ್ರೊ. ಎನ್. ತಮ್ಮಣ್ಣಗೌಡ,** ನಿವೃತ್ತ ಪ್ರಾಂಶುಪಾಲರು, ನಂ. ೨೭೫, ೪ನೇ ಮುಖ್ಯರಸ್ತೆ, ೧ನೇ ಹಂತ, ವಿಜಯನಗರ, ಮೈಸೂರು.

**ಸದಸ್ಯರು**

**ಶ್ರೀ ವಿ. ರಂಗಪ್ಪಯ್ಯಹೊಳ್ಳ,** ನಿವೃತ್ತ ಕನ್ನಡ ಭಾಷಾ ಶಿಕ್ಷಕರು, ಶ್ರೀ ನಿವಾಸ ಚಿತ್ರಪಾಡಿ, ಸಾಲಿಗ್ರಾಮ, ಉಡುಪಿ ತಾಲೂಕು.

**ಶ್ರೀ ಬೆಳವಾಡಿ ಮಂಜುನಾಥ,** ಉಪನ್ಯಾಸಕರು, ಸ.ಪ.ಪೂ. ಕಾಲೇಜು, ಮೂಗ್ತಿಹಳ್ಳಿ, ಚಿಕ್ಕಮಗಳೂರು ತಾಲೂಕು.

**ಶ್ರೀ ವಿಶ್ವೇಶ್ವರ ಭಟ್,** ಕನ್ನಡ ಉಪನ್ಯಾಸಕರು, ವಿಠಲ ಪ.ಪೂ. ಕಾಲೇಜು, ವಿಟ್ಲ, ಬಂಟ್ವಾಳ ತಾಲೂಕು.

**ಶ್ರೀ ನೆಂಪು. ನರಸಿಂಹ ಭಟ್,** ನಿವೃತ್ತ ಕನ್ನಡ ಅಧ್ಯಾಪಕರು, ಅಚ್ಯುತನಗರ, ಪರ್ಕಳ ಅಂಚೆ, ಕಾರ್ಕಳ ತಾಲೂಕು.



**ಪರಿಶೀಲಕರು**

**ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು-೫೬೦೧೦೪

**ಸಂಪಾದಕ ಮಂಡಳಿ ಸದಸ್ಯರು**

**ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ. ನಗರ, ಬೆಂಗಳೂರು-೭೮

**ಡಾ. ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ ೧೩೭, ೧೨ನೆಯ ಕ್ರಾಸ್, ಜೆ.ಪಿ. ನಗರ, ಬೆಂಗಳೂರು-೭೮

**ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

**ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಾಪುರ.

**ಮುಖ್ಯ ಸಂಯೋಜಕರು**

**ಪ್ರೊ. ಜಿ.ಎಸ್.ಮುಡಂಬಡಿತ್ತಾಯ,** ಪಠ್ಯವಸ್ತು ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು-೮೫

**ಸಲಹೆ ಮತ್ತು ಮಾರ್ಗದರ್ಶನ**

**ಶ್ರೀ ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು-೮೫

**ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು-೫೬೦ ೦೮೫

**ಕಾರ್ಯಕ್ರಮ ಸಂಯೋಜಕರು**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು-೮೫

# ಮುನ್ನುಡಿ

೨೦೦೫ನೇ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೇ ಸಾಲಿನಿಂದ ಒಂದನೇ ತರಗತಿಯಿಂದ ಹತ್ತನೇ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ೧ ರಿಂದ ೪ ನೇ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು ೫ ರಿಂದ ೧೦ ನೇ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನವನ್ನು ಸಂಯೋಜಿಸುವುದು.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.



ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲ್ಯಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲ್ಯಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು,

ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲ್ಯಗಳ ಸಂವರ್ಧನೆಯೇ ಕಲಿಕೆ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ಮಕ್ಕಳಲ್ಲಿ ವೃದ್ಧಿಮಾಡುತ್ತದೆ. ಹತ್ತನೇ ತರಗತಿಯ ಪಠ್ಯಪುಸ್ತಕಗಳು ಒಂದು ದೃಷ್ಟಿಯಲ್ಲಿ ವೈಶಿಷ್ಟ್ಯಪೂರ್ಣವಾಗಿವೆ. ಇತರ ಪಠ್ಯಪುಸ್ತಕಗಳಂತೆಯೇ ಈ ಪಠ್ಯಪುಸ್ತಕಗಳು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಸಾಮರ್ಥ್ಯ ಹಾಗೂ ಕೌಶಲ್ಯಗಳನ್ನು ಬೆಳಸಿಕೊಳ್ಳಲು ಸಹಾಯ ಮಾಡುತ್ತವೆ. ಇದರೊಂದಿಗೆ ೧೦ನೇ ತರಗತಿ ಶಿಕ್ಷಣದ ಒಂದು ಹಂತದ ಅಂತ್ಯದಾಣವಾಗಿರುವುದರಿಂದ ವಿದ್ಯಾರ್ಥಿ  ವಿದ್ಯಾರ್ಥಿನಿಯರು ಪಬ್ಲಿಕ್ ಪರೀಕ್ಷೆಯನ್ನು ಎದುರಿಸಬೇಕಾಗುತ್ತದೆ.

ಸಿರಿ ಕನ್ನಡ–೧೦ ಕನ್ನಡ ಪ್ರಥಮ ಭಾಷೆಯ ಪಠ್ಯಪುಸ್ತಕ ರಚನಾ ಸಮಿತಿಯಲ್ಲಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದು ರಚನಾ ಕಾರ್ಯ ಪೂರ್ಣಗೊಳ್ಳುವ ಹಂತದಲ್ಲಿರುವಾಗ ಅಕಾಲ ಮರಣವನ್ನಪ್ಪಿದ ಪ್ರಾಧ್ಯಾಪಕರಾದ ಡಾ. ಸಿ.ಎಸ್. ರಾಮಚಂದ್ರರವರನ್ನು ಕರ್ನಾಟಕ ಪಠ್ಯಪುಸ್ತಕ ಸಂಘ ಗೌರವಪೂರ್ವಕವಾಗಿ ಸ್ಮರಿಸುತ್ತದೆ. ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ,  ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.



**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯವಸ್ತು ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

## ಬೋಧನೆಗೆ ಮುನ್ನ....

ಮಾತೃಭಾಷೆಯ ಕಲಿಕೆ ಮತ್ತು ಬಳಕೆ ಅತ್ಯಂತ ಮಹತ್ವದ್ದು. ಬೋಧನೆಗಾಗಿ ಸಿದ್ಧಪಡಿಸುವ ಪಠ್ಯವು ತಾಯ್ನುಡಿಯ ಕಲಿಕೆಗೆ ಪೂರಕವಾಗಿರಬೇಕಾದುದು ಅಗತ್ಯ. ಹತ್ತನೆಯ ತರಗತಿಯಲ್ಲಿ ಕಲಿಯುತ್ತಿರುವ ವಿದ್ಯಾರ್ಥಿ ತಕ್ಕಮಟ್ಟಿಗಾದರೂ ತಾಯ್ನುಡಿಯನ್ನು ಸೃಜನಾತ್ಮಕವಾಗಿ ಬಳಸುವ ಸಾಮರ್ಥ್ಯವನ್ನು ಗಳಿಸಿಕೊಳ್ಳಬೇಕೆಂಬುದು ಅಪೇಕ್ಷಣೀಯ. ಈ ಅಪೇಕ್ಷೆಯನ್ನು ಸಾಧ್ಯವಾಗಿಸುವಾಗ ವಿದ್ಯಾರ್ಥಿಗೆ ಗ್ರಹಿಕೆ ಹಾಗೂ ಕಲಿಕೆ ಸಂತಸವನ್ನು ನೀಡುವಂತಿರಬೇಕು. ಜ್ಞಾನಾರ್ಜನೆಯ ಉದ್ದೇಶವು ನೆರವೇರಬೇಕು. ಕಲಿಕೆ ಹಾಗೂ ಕಲಿಸುವಿಕೆಯ ನಿರ್ಧಾರಿತ ವಿಧಾನ ಮತ್ತು ಮೌಲ್ಯವನ್ನು ಸಾರ್ವತ್ರಿಕ ಶೈಕ್ಷಣಿಕ ನೆಲೆಯಲ್ಲಿ ಮೌಲೀಕರಿಸುವ ಉದ್ದೇಶದಿಂದ ಎನ್.ಸಿ.ಎಫ್ ೨೦೦೫ ಮತ್ತು ಕೆ.ಸಿ.ಎಫ್ ೨೦೦೭ರ ಚಿಂತನೆಗಳನ್ನು ಗಮನದಲ್ಲಿ ಇರಿಸಿಕೊಳ್ಳಲಾಗಿದೆ.

ಹಲ್ಮಿಡಿಶಾಸನದಿಂದ ಮೊದಲ್ಗೊಂಡು ಇಂದಿನವರೆಗಿನ ತಾಯ್ನುಡಿಯ ಸಾಹಿತ್ಯಲೋಕದ ಕಿರುಪರಿಚಯ ಮಾಡಿಕೊಡುವ ಮೂಲಕ ಮಾತೃಭಾಷೆಯ ಇಂಪನ್ನು ನಿರಂತರವಾಗಿ ಸವಿಯುವ ಅವಕಾಶವನ್ನು ವಿದ್ಯಾರ್ಥಿಗೆ ಕಲ್ಪಿಸಿಕೊಡಬೇಕು. ಬಾಳಿನಹೋರಾಟದಲ್ಲಿ ಧೀಮಂತರಾಗಿ ಬಾಳಿದ ವ್ಯಕ್ತಿಗಳ ಪರಿಚಯ, ನಾಡು-ನುಡಿಯ ಬಗೆಗೆ ಹಿರಿಯರ ಚಿಂತನೆ, ವೈಚಾರಿಕ ಚಿಂತನೆಗಳನ್ನೊಳಗೊಂಡ ಬರೆಹಗಳ ಜೊತೆಗೆ ನಾಟಕ ಪ್ರಕಾರದಲ್ಲಿ ಗೀತನಾಟಕವನ್ನು ಪರಿಚಯಿಸಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ, ಪ್ರಾದೇಶಿಕ ಮತ್ತು ಲಿಂಗಸಮಾನತೆಯನ್ನು ಕಾಯ್ದುಕೊಳ್ಳಲಾಗಿದೆ. ಸೈದ್ಧಾಂತಿಕ ಭಾಷಾಭ್ಯಾಸದಲ್ಲಿ ವ್ಯಾಕರಣ ಅಲಂಕಾರ ಮತ್ತು ಛಂದಸ್ಸನ್ನು ಸರಳವಾಗಿ ಪರಿಚಯಿಸಲಾಗಿದೆ. ಪಠ್ಯಪೋಷಕ ಅಧ್ಯಯನದಲ್ಲಿ ವಿದ್ಯಾರ್ಥಿಯ ಗ್ರಹಿಕಾ ಸಾಮರ್ಥ್ಯವನ್ನು ವೃದ್ಧಿಸುವ ಪಾಠಗಳನ್ನು ಅಳವಡಿಸಲಾಗಿದೆ.

ಪಠ್ಯವನ್ನು ವಿದ್ಯಾರ್ಥಿಗಳು ಸುಲಭವಾಗಿ ಅರ್ಥೈಸಿಕೊಳ್ಳುವ ದೃಷ್ಟಿಯಿಂದ ಮುನ್ನಯಾರಿ, ಅರ್ಥೈಸಿ ಓದಿ, ಕರ್ತೃ-ಭಾವ-ಆಕರ, ಪದ-ಅರ್ಥ, ಪಠ್ಯಾಧಾರಿತ ಟಿಪ್ಪಣಿ, ಸೈದ್ಧಾಂತಿಕ ಭಾಷಾಭ್ಯಾಸ ಇತ್ಯಾದಿಗಳನ್ನು, ಅಳವಡಿಸಿಕೊಳ್ಳಲಾಗಿದೆ. ಕಲಿಕೆಯ ಮುನ್ನ ಅರ್ಥೈಸಿ ಓದಿ ಶೀರ್ಷಿಕೆಯಲ್ಲಿ ಗದ್ಯ/ಪದ್ಯದ ಕೆಲವು ವಿಶೇಷ ಪದಗಳನ್ನು ಓದುವ ಸಲುವಾಗಿ ನೀಡಲಾಗಿದೆ. ಮುಖ್ಯವಾಗಿ ಓದುವಿಕೆಯನ್ನು ಖಚಿತಪಡಿಸುವ ಉದ್ದೇಶ ಇದರದು. ಅಭ್ಯಾಸದಲ್ಲಿರುವ ಪ್ರಶ್ನೆಗಳು ವಿದ್ಯಾರ್ಥಿಗಳು ಕಲಿಕೆಯಲ್ಲಿ ಸಾಮರ್ಥ್ಯಗಳಿಸುವುದಕ್ಕಾಗಿಯೇ ಹೊರತು ಪರೀಕ್ಷೆಯ ಪ್ರಶ್ನಪತ್ರಿಕೆಯ ತಯಾರಿಗಾಗಿ ಅಲ್ಲ. **ಪಠ್ಯಪೋಷಕ ಅಧ್ಯಯನದ ಐದು ಪಾಠಗಳಿಂದ ಹತ್ತು ಅಂಕಗಳ ಪ್ರಶ್ನೆಗಳನ್ನು ಕೇಳಬೇಕಾದುದು ಕಡ್ಡಾಯ. ಪ್ರತಿ ಪಾಠದಿಂದ ತಲಾ ಎರಡು ಅಂಕಗಳ ಪ್ರಶ್ನೆಗಳನ್ನು ಕೇಳಲೇಬೇಕು. ಹೀಗೆ ಕೇಳುವಾಗ ಒಂದು ಅಂಕದ ಎರಡು ಪ್ರಶ್ನೆಗಳನ್ನು ಅಥವಾ ಎರಡು ಅಂಕಗಳ ಒಂದು ಪ್ರಶ್ನೆಯನ್ನು ಕೇಳಬಹುದು.**

ಸಿರಿ ಕನ್ನಡ-೧೦ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕವು ಸಮಿತಿಯ ಸದಸ್ಯರ ಹಲವಾರು ದಿವಸಗಳ ಚಿಂತನಮಂಥನಗಳ ಫಲವಾಗಿ ರೂಪುಗೊಂಡಿದೆ. ಈ ಕಾರ್ಯದಲ್ಲಿ ಸಹಕರಿಸಿದ ಪಠ್ಯಪುಸ್ತಕ ರಚನಾ ಸಮಿತಿ ಸದಸ್ಯರಿಗೆ ಪರಿಶೀಲಕರಿಗೆ ಮತ್ತು ಸಂಪಾದಕ ಮಂಡಳಿಯ ಗೌರವಾನ್ವಿತ ಸದಸ್ಯರಿಗೆ ಹಾಗೂ ಸಿರಿ ಕನ್ನಡ-೯ರ ಸಮಿತಿ ಸದಸ್ಯರಿಗೂ, ಸಿರಿ ಕನ್ನಡ -೧೦ರ ರಚನಾ ಸಮಿತಿ ಪರವಾಗಿ ಆತ್ಮೀಯ ನಮನಗಳು.

ಬಹುಮುಖ್ಯವಾಗಿ ಸಿರಿ ಕನ್ನಡ-೧೦ ಪ್ರಥಮ ಭಾಷೆ ಕನ್ನಡ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದು ಅಕಾಲಮರಣವನ್ನಪ್ಪಿದ ಸರಳ, ಸಂಭಾವಿತ ಸುಸಂಸ್ಕೃತ ಪ್ರಾಧ್ಯಾಪಕ ಡಾ. ಸಿ. ಎಸ್. ರಾಮಚಂದ್ರರವರನ್ನು ಗೌರವಪೂರ್ವಕವಾಗಿ ಸ್ಮರಿಸುತ್ತೇನೆ. ಈ ಒಂದು ಆಕಸ್ಮಿಕದಿಂದ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷನ ಕಾರ್ಯವನ್ನು ನಾನು ನಿರ್ವಹಿಸಬೇಕಾಯಿತು. ಈ ಹಂತದಲ್ಲಿ ಸೂಕ್ತ ಸಲಹೆ, ಬೆಂಬಲ, ನೆರವನ್ನು ನೀಡಿದ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ವೈ.ಟಿ.ಗುರುಮೂರ್ತಿಯವರಿಗೂ ವ್ಯವಸ್ಥಾಪಕ ಸಂಯೋಜಕರಾದ ಪ್ರೊ. ಮುಡಂಬಡಿತ್ತಾಯರವರಿಗೂ ಮತ್ತು ಉಪ ನಿರ್ದೇಶಕರಾದ ಶ್ರೀ ಬೆಳ್ಳಶೆಟ್ಟರವರಿಗೂ ಈ ಪಠ್ಯರಚನೆಯ ವಿವಿಧ ಹಂತಗಳಲ್ಲಿ ನಮ್ಮೊಡನೆ ಒಬ್ಬರಾಗಿ ಸಹಕರಿಸಿದ ಹಿರಿಯ ಸಹಾಯಕ ನಿರ್ದೇಶಕರಾದ ಶ್ರೀ ಪಾಂಡುರಂಗ ರವರಿಗೂ ಪಠ್ಯಪುಸ್ತಕದ 'ಕರಡು ಪ್ರತಿ'ಯನ್ನು ಕೂಲಂಕಷವಾಗಿ ಓದಿ ಪರಿಶೀಲಿಸಿ ಹಿಮ್ಮಾಹಿತಿ ನೀಡಿದ ಸಿ.ಟಿ.ಇ. ಪ್ರಾಂಶುಪಾಲರಿಗೆ ಮತ್ತು ಉಪಾಧ್ಯಾಯ ಬಂಧುಗಳಿಗೂ ಸಮಿತಿಯ ಪರವಾಗಿ ಧನ್ಯವಾದಗಳು.

**ಪ್ರೊ. ಎನ್. ತಮ್ಮಣ್ಣ ಗೌಡ,**
ಅಧ್ಯಕ್ಷ, ಸಿರಿ ಕನ್ನಡ-೧೦,
ಪಠ್ಯಪುಸ್ತಕ ರಚನಾ ಸಮಿತಿ

# ಪಠ್ಯಪ್ರಧಾನ ಅಧ್ಯಯನ

## ಪಾಠಾನುಕ್ರಮಣಿಕೆ


| ಕ್ರಮ ಸಂಖ್ಯೆ | ಗದ್ಯಭಾಗ | ಕವಿಗಳು/ಲೇಖಕರು | ಪುಟ ಸಂಖ್ಯೆ |
|---|---|---|---|
| ೦೧ | ಶಬರಿ | ಪು. ತಿ. ನರಸಿಂಹಾಚಾರ್ | ೦೧ |
| ೦೨ | ಅಮೆರಿಕದಲ್ಲಿ ಗೊರೂರು | ಗೊರೂರು ರಾಮಸ್ವಾಮಿ ಅಯ್ಯಂಗಾರ್ | ೧೪ |
| ೦೩ | ಜೀವನದೃಷ್ಟಿ | ವಿ.ಕೃ.ಗೋಕಾಕ್ | ೨೨ |
| ೦೪ | ಧರ್ಮಸಮದೃಷ್ಟಿ | ಶಾಸನ (ಸಂಗ್ರಹ) | ೨೯ |
| ೦೫ | ಭಾಗ್ಯಶಿಲ್ಪಿ ಸರ್ ಎಂ. ವಿಶ್ವೇಶ್ವರಯ್ಯ | ಡಿ. ಎಸ್. ಜಯಪ್ಪಗೌಡ | ೩೯ |
| ೦೬ | ಎದೆಗೆ ಬಿದ್ದ ಅಕ್ಷರ | ದೇವನೂರ ಮಹಾದೇವ | ೪೮ |
| ೦೭ | ವೃಕ್ಷಸಾಕ್ಷಿ | ದುರ್ಗಸಿಂಹ | ೫೬ |
| ೦೮ | ವ್ಯಾಘ್ರಗೀತೆ | ಎ. ಎನ್. ಮೂರ್ತಿರಾವ್ | ೬೭ |
| | ಪದ್ಯಭಾಗ | | |
| ೦೧ | ಎಮ್ಮನುಡಿಗೇಳ್ | ಆದಿಕವಿ ಪಂಪ | ೭೭ |
| ೦೨ | ಹಕ್ಕಿಹಾರುತಿದೆ ನೋಡಿದಿರಾ | ದ. ರಾ. ಬೇಂದ್ರೆ | ೮೬ |
| ೦೩ | ಹಲಗಲಿ ಬೇಡರು | ಜಾನಪದ (ಸಂಗ್ರಹ) | ೯೧ |
| ೦೪ | ವಚನ ಸೌರಭ | ಜೇಡರದಾಸಿಮಯ್ಯ, ಬಸವಣ್ಣ | ೯೮ |
| ೦೫ | ಸಂಕಲ್ಪಗೀತೆ | ಜಿ. ಎಸ್. ಶಿವರುದ್ರಪ್ಪ | ೧೦೪ |
| ೦೬ | ಕೌರವೇಂದ್ರನ ಕೊಂದೆ ನೀನು | ಕುಮಾರವ್ಯಾಸ | ೧೧೦ |
| ೦೭ | ವೀರಲವ | ಲಕ್ಷ್ಮೀಶ | ೧೨೦ |
| ೦೮ | ಸಾರ್ಥಕತೆ | ದು. ಸರಸ್ವತಿ, ಇಂದುಮತಿ ಲಮಾಣಿ | ೧೨೮ |
| | ಪಠ್ಯ ಪೋಷಕ ಅಧ್ಯಯನ | | |
| ೦೧ | ವಿಜ್ಞಾನ ಮತ್ತು ಸಮಾಜ | ಎಚ್. ನರಸಿಂಹಯ್ಯ | ೧೩೩ |
| ೦೨ | ನಾಮಫಲಕ | ನಿರ್ಮಲ | ೧೩೬ |
| ೦೩ | ಉದಾತ್ತ ಚಿಂತನೆಗಳು | ಸಂಗ್ರಹ | ೧೩೯ |
| ೦೪ | ಪಾರಿವಾಳ | ಸು.ರಂ. ಎಕ್ಕುಂಡಿ | ೧೪೨ |
| ೦೫ | ಜನಪದ ಒಗಟುಗಳು | ಸಂಗ್ರಹ | ೧೪೩ |
| | ಪಠ್ಯಾಧಾರಿತ ಪದಕೋಶ | | ೧೪೬ |

ಗದ್ಯ ಭಾಗ

ಪಠ್ಯಪ್ರಧಾನ ಅಧ್ಯಯನ

## ಗದ್ಯಪಾಠ – ೦೧

# ಶಬರಿ

– ಪು. ತಿ. ನರಸಿಂಹಾಚಾರ್

**ಮುನ್ನುಯಾರಿ :** ಕಾವ್ಯಗಳಲ್ಲಿ ನಾಟಕ ಮನೋಹರವಾದುದು. ಅಭಿನಯ, ದೃಶ್ಯ, ಸಂಭಾಷಣೆ, ಸಂಗೀತಗಳಿಂದ ಪ್ರೇಕ್ಷಕ ಸಹೃದಯರಿಗೆ ಆನಂದವನ್ನು ನೀಡುತ್ತದೆ. ಆಧುನಿಕ ನಾಟಕದ ವಿವಿಧ ಪ್ರಕಾರಗಳಲ್ಲಿ ಗೀತನಾಟಕವೂ ಒಂದು. ಗದ್ಯ ಪದ್ಯಗಳಿಂದ ಕೂಡಿದ ಇದರಲ್ಲಿ ನೃತ್ಯ ಹಾಗೂ ಗೀತೆಗೆ ಹೆಚ್ಚು ಪ್ರಾಧಾನ್ಯ. ಕಥೆಯ ಘಟನೆಗಳಿಗೆ ಪೂರಕವಾಗುವ ಮೇಳದವರ ಭಾಗವಹಿಸುವಿಕೆ ನಾಟಕದ ಸೊಗಸನ್ನು ಹೆಚ್ಚಿಸುತ್ತದೆ.

ರಾಮಾಯಣ, ಮಹಾಭಾರತ ಪ್ರಸಿದ್ಧ ಕಾವ್ಯಗಳು. ಅವುಗಳಿಂದ ಪ್ರೇರಿತವಾಗಿ ಸಾಹಿತ್ಯದ ವಿವಿಧ ಪ್ರಕಾರಗಳು ಸಮೃದ್ಧವಾಗಿ ರಚಿತವಾಗಿವೆ. ಅದರಲ್ಲಿ ಗೀತನಾಟಕಗಳೂ ಜನಪ್ರಿಯವಾಗಿವೆ. ಸಾಹಿತ್ಯ, ಸಂಗೀತ, ನೃತ್ಯ, ಕಲೆಗಳ ಸಂಗಮವಾದ ಗೀತನಾಟಕ ಸಂಭಾಷಣಾಯುಕ್ತವಾದುದು, ಪ್ರತಿಯೊಂದು ಪಾತ್ರದ ಹಿರಿಮೆಯೊಂದಿಗೆ ಸಂವೇದನಾಶೀಲವಾಗಿ ಕಥೆಯನ್ನು ನಿರೂಪಿಸುವಗುಣ ಈ ಗೀತನಾಟಕದ್ದಾಗಿದೆ.



**ಅರ್ಥೈಸಿ ಓದಿ**

| | | | | |
|---|---|---|---|---|
| **ಗೀತನಾಟಕ,** | **ಮೇಳ,** | **ಮತಂಗ,** | **ಶ್ರಮಣಿ,** | **ದಶರಥ,** |
| **ಸಿದ್ಧರು,** | **ಮರುಳು,** | **ಮಧುಪರ್ಕ,** | **ಸನ್ಮಂಗಳ,** | **ಗದ್ಗದಿಸು** |

**(ಮತಂಗಾಶ್ರಮದಲ್ಲಿ ತನ್ನ ಪರ್ಣಶಾಲೆಯ ಮುಂದಿನ ವನದಲ್ಲಿ ಶಬರಿ ಹಂಬಲುಗೊಂಡಿದ್ದಾಳೆ. ಶ್ರಮಣಿಯಂತೆ ರೂಪ; ವೃದ್ಧೆ, ಚೀರ ಕೃಷ್ಣಾಜಿನಾಂಬರೆ ; ನೋಡುವುದಕ್ಕೆ ಬುದ್ಧಿಹೀನಳಂತೆ ಕಾಣುತ್ತಾಳೆ.)**

**ಶಬರಿ** : ನಿಂತಲ್ಲಿಯೆ ನಾ ನಿಂತಿರುವೆ । ರಾಮಾ ನೀನೆಂದೈತರುವೆ
ನೀನಿಹುದೆಲ್ಲೋ ನಾನರಿಯೆ । ನಿನ್ನೆಡೆಗೈದುವ ಬಳಿಯರಿಯೆ
ನೀ ಬಹೆ ಎನ್ನುವ ನೆಚ್ಚಿನೊಳು । ನಾನಿಹೆ ಬಯಕೆಯ ಹುಚ್ಚಿನೊಳು !! ನಿಂತಲ್ಲಿಯೇ....
[ಶಬರಿ ಬನದೊಳಕ್ಕೆ ಹೋಗುವಳು. ರಾಮ ಲಕ್ಷ್ಮಣರು ಪ್ರವೇಶಿಸುತ್ತಾರೆ.]

**ರಾಮ** : ದೊರೆವಳೇ ಸೀತೆ । ಭೂಮಿಜಾತೆ ಆತ್ಮ ಕಾಮಕಲ್ಪಲತೆ
ದೊರೆವಳೇ ಚೆಲುವೆ ? । ಎರೆವೆ ಎರೆವೆ ಗಿರಿವನವೇ, ಪೇಳಿರಿ ನಾನೆರೆವೆ
ದೊರೆವಳೇ ? ದೊರೆಯಳೇ ?
ಅವಳ ನೆಲೆ ಯಾರು ಅರಿಯಿರೇ, ಪೇಳಿ ಎನ್ನರಸಿ ದೊರೆಯಳೇ ?
ಈ ಬೇಗೆ ಕೆಡದಲಾ । ನನ್ನೆದೆಯ ಬಿಡದಲಾ ಈ ಜಗವ ಸುಡದಲಾ। ಹಾ ! ಹಾ ! ಹಾ!

**ಲಕ್ಷ್ಮಣ** : ತಾಳಿಕೋ ಅಣ್ಣ ತಾಳಿಕೋ । ಸೂರ್ಯನೇ ತೇಜಗೆಡೆ ತೇಜಕೆಡೆಯಾರು ?
ರಾಮನೇ ಧೈರ್ಯಗೆಡೆ ಸ್ಥೈರ್ಯಕೆಡೆಯಾರು ?

**ರಾಮ** : [ಸ್ಥೈರ್ಯವಾಂತು] ಅವಳ ನೆನಪಿನ ಸೆಳೆತಕೆನ್ನಾತ್ಮ ಸಿಲ್ಕೆ। ಎನ್ನ ಬಗೆಗನಿವಾರ್ಯವೀ ಶೋಕದುಲ್ಕೆ.
ಇಗೊ ನೋಡು ಲಕ್ಷ್ಮಣ ತಾಪಸರ ಬೀಡು

ಇದ ನೋಡಿ ಮರುಕೊಳಿಸಿತೆನಗವಳ ಪಾಡು.

**ಲಕ್ಷ್ಮಣ** : ಅಹುದು ದಿಟ ಚಿತ್ರಕೂಟವೆ ಮನಕೆ ಬಹುದು । ಜತೆಯೊಳತ್ತಿಗೆಯಿದ್ದ ಬಗೆಯ ತಹುದು.
ಹಾ ! ಪಾಪಿ, ನಾ ಆಕೆಯನು ಒಂಟಿಯೊಳೆ ಬಿಟ್ಟೆ । ಎನ್ನಹಂಕೃತಿಗೆಯೇ ಮನ್ನಣೆಯ ಕೊಟ್ಟೆ.

**ರಾಮ** : ಮರುಗದಿರು ತಮ್ಮಯ್ಯ ಆದುದಾಯಿತ್ತು । ನಿಮ್ಮನಿಂತಾ ದೈವ ಮರುಳು ಮಾಡಿತ್ತು.
ದನುಪೇಳ್ದ ದಾರಿಯೊಳೆ ನಾವು ಬಂದಿಹೆವೆ ? । ಶ್ರಮಣಿಯಾಶ್ರಮವಿದುವೆ ?
ಅಗೊ ಲಕ್ಷ್ಮಣಾ, ಅತ್ತ ಆವುದೀ ಮರುಳು ? । ನಮ್ಮೆಡೆಗೆ ಬರುತಿಹುದು ಏನಿದರ ಹುರುಳು ?

**ಲಕ್ಷ್ಮಣ** : ಮರೆಗೆ ಬಾ ಅಣ್ಣಯ್ಯ, ಪರಿಕಿಸುವ ಮುನ್ನ । ಇದಿರುಗೊಳೆ ನಾವಿದನು ಏನಹುದೊ ಬನ್ನ.
**[ಮರೆಯೊಳಿರುವರು. ಶಬರಿ ತಳಿರು ಹೂ ಹಣ್ಣುಹಂಪಲಗಳನ್ನು ತಲೆ ಕಂಕುಳು ಕೈಯಲ್ಲಿ ಕೊಂಡು ಬರುವಳು.]**

**ಶಬರಿ** : ರಾಮ ಬಾರದೇ । ನನಗೇನು ತೋರದೇ !!ಪ!!
ಅವ ಸವಿದಲ್ಲದೆ ಸವಿಯಾಗದ ಈ । ಕಡುಸವಿ ಹಣ್ಗಳನೇಗೆಯ್ವೆಂ
ಮಧುಕರ ಗೀತದ ಮಧು ಊರಿರುವೀ । ಮಧುಪರ್ಕವ ನಾನಾರ್ಗೀವೆಂ ॥ ರಾಮ ಬಾರದೇ....
ಬಾ ರಾಮಾ, ಬಾ ರಾಮಾ, ಬಾರೈ । ಬಾ ಬಾ ಬಗೆಯಿರುಳಿನ ಪೆರೆಯೇ
ಕೋ ಕೋ ಹಣ್ಗಳ ಕೋ ಹೂಗಳ ಕೋ । ಎಲ್ಲವ ಕೋ ಎನ್ನೊಳಮೊರೆಯೇ
ರಾಮ ಬಾರದೇ । ನನಗೇನು ಸೇರದೇ.
**[ಪರ್ಣಶಾಲೆಯೊಳಕ್ಕೆ ಹೋಗುವಳು. ರಾಮ ಲಕ್ಷ್ಮಣರು ಕಾಣಿಸಿಕೊಳ್ಳುತ್ತಾರೆ.]**

**ರಾಮ** : ಎನಗಿನಿತು ಹಂಬಲಿಪ ಈ ಜಟಿಲಕಬರಿ । ಆ ಉದರಮುಖನೊರೆದ ಶ್ರಮಣಿ ಶಬರಿ.
ಉಪಕಾರವಿನಿತಿಲ್ಲ ಈಕೆಗೆನ್ನಿಂದ । ಆದೊಡೆಯು ನೆನೆಯುತಿಹಳೆನಿತರ್ತಿಯಿಂದ !
ನಾಚುತಿಹೆನೀ ಪೂಜ್ಯೆಯೀ ನಲುಮೆಯಿಂದ.

**ಲಕ್ಷ್ಮಣ** : ನಿನ್ನನೋಡದೆ ಇಂತು ಮರುಳಾದ ಈ ಸಿದ್ಧೆ । ಇನ್ನು ನೋಡಿದ ಬಳಿಕ ಏನಪ್ಪಳೋ ವೃದ್ಧೆ !

**ರಾಮ** : ರೂಪಕೂ ನಾಮ ಮಿಗಿಲಾತ್ಮ ಸುರಭಿಯದು । ಎನ್ನ ಕಾಣುತಲಿವಳ ಬೆರಗು ತಿಳಿಯುವುದು.

**ಲಕ್ಷ್ಮಣ** : ನಿತ್ಯ ನೋಡುತಲಿಹೆನು ಬೆರಗು ತಣಿಯದಿದೆ । ಪರಿಕಿಸುವ ಬಾ ಇದನು ಶ್ರಮಣಿಯಾಶ್ರಮದೆ.

**ರಾಮ** : ನಡೆ ಮುಂದೆ, ಲಕ್ಷ್ಮಣ.

**ಲಕ್ಷ್ಮಣ** : ಇಂದು ನೀನೆ ಮುಂದೆ । ನಾನಿರುವೆ ಹಿಂದೆ ।
ಮೊದಲ ದಿಟ್ಟಿಗೆ ನೀನು । ಬಳಿಕ ನಾನು _ **[ಹೊರಡುವರು.]**

[ಒಳತೆರೆ ಎದ್ದು ವಿಶಾಲವಾದ ಶಬರಿಯಾಶ್ರಮವನ್ನು ತೋರುವುದು.ಅಲ್ಲಿ ದೂರದಲ್ಲಿ, ಹಿಂಬದಿಗೆ ವೇದಿಯಿದೆ.ಅದರ ಸುತ್ತ ಆಶ್ರಮದ ಸಿದ್ಧರು ಅಲಂಕರಿಸಿಹೋದ ಹೂವು ಇನ್ನೂ ಬಾಡದಂತಿವೆ. ವೇದಿಯಲ್ಲಿ ಅಗ್ನಿ ಹೊಗೆಯಾಡುತ್ತಿದೆ. ಶಬರಿ ನಿನ್ನೆ ರಾಮನಿಗೆಂದು ಆರಿಸಿ ತಂದ, ಈಗ ಬಾಡಿ ಹೋಗಿರುವ ಹೂ ಹಣ್ಣು ತಳಿರುಗಳನ್ನು ವಿಂಗಡಿಸುತ್ತಾ ಅವುಗಳ ಜಾಗದಲ್ಲಿ ಹೊಸದನ್ನು ಇಡುತ್ತಾ ಇದ್ದಾಳೆ. ಅವುಗಳನ್ನು ಉದ್ದೇಶಿಸಿ ಈ ತೆರ ಹಾಡುತ್ತಾಳೆ.]

**ಶಬರಿ** : ನಿನ್ನೆಳಮೆ ಮೃದುತೆಯನು ಅವನ ಸ್ಪರ್ಶಕೆ ತೆರದೆ ।
ಬರಿಗಾಳಿಗಾರಿರುವ ನಿನ್ನೆ ಚೆಂದಳಿರೇ,
ತುಂಬಿ ಬಂಬಲ ಹೊಗಳ್ವೆಗಿಂಬಾದ ಕಂಪಿನಿಂ_ ।

ದವನಸುವನುದ್ದೀಪಿಸದೆ ಸೊರಗಿದಲರೇ,
ಅವನ ಪ್ರಾಣಾಹುತಿಗೆ ಬರದೆ ರುಚಿ ಹದ ಕೆಟ್ಟು ।
ಹುಳುವಿಗಾಸರೆಯಾದ ಎಲೆ ವನ್ಯ ಫಲವೇ
ಮೀಸಲಾಗದೆ ಇಂತು ಮಾಸಲಾಗುವ ಇವನು ।
ಮರಮರಳಿ ಹೊಸತರಿಂದಣಿಗೈವ ಛಲವೇ
[ಮಾಲೆಯನ್ನು ಕಟ್ಟುತ್ತಾ ಹಾಡುತ್ತಾಳೆ.]
ಎಂದು ಕಾಂಬೆ ನಾ ರಾಮನ । ನೆಂದು ಕಾಂಬೆ ನಾ !!ಪ!!
ದಶರಥನ ಪುತ್ರನಂತೆ । ಸಾಧು ಜನರ ಮಿತ್ರನಂತೆ
ಧೀರ ಶೂರ ವೀರ ಗಂ_ । ಭೀರ ಸದ್ಗುಣ ಸಾರನಂತೆ – ಎಂದು ಕಾಂಬೆ ನಾ . . .
ಅಂಜಿಸುವವರಂಜುವಂತೆ । ಬಿಲ್ಲ ಹಿಡಿದು ಬರುವನಂತೆ
ಆದೊಡೆ ಬಲು ಸೌಮ್ಯನಂತೆ । ಹಸುಳೆಯಂತೆ ಕಾಂಬನಂತೆ – ಎಂದು . . .
ಅರಸುತನವ ತೊರೆದನಂತೆ । ತವಸಿತನವ ಕೊಂಡನಂತೆ
ತಮ್ಮನೊಡನೆ ಬನಕೆ ಬರಲು । ಮನದಿ ಭಯವೆ ಇಲ್ಲವಂತೆ – ಎಂದು . . .
ಕೆಟ್ಟ ಕನಸಿನಿರುಳ ಕಳೆವ । ಸುಪ್ರಭಾತದಂಥವನನು
ಗುರುಸಿದ್ಧರೆ ಮೆಚ್ಚಿದಂಥ । ಸನ್ಮಂಗಳ ಮೂರುತಿಯನು – ಎಂದು . . .
[ ಕಟ್ಟಿದ ಮಾಲೆಗೆ ಮುದ್ದಿಕ್ಕುವಳು]

**ರಾಮ** : [ಬಾಗಿಲಿನ ಬಳಿ ಅದನ್ನು ತುಂಬಿ ನಿಂತು, ಲಕ್ಷ್ಮಣ ಹಿಂಬದಿಗಿರಲು] ತಾಯಿ, ದಾರಿಗರಿಗೆ ಬೀಡಿಲ್ಲಿ ದೊರೆವುದೇ?

**ಶಬರಿ** : [ನಡುಗುವೆದೆಯಿಂದ ಹಿಂತಿರುಗಿ ನಿಟ್ಟಿಸಿ ಮೊದಲು ಬೆರಗು ಕಳೆದ ಮೇಲೆ] ನೀ ರಾಮನೇ, ಮಹಾಪುರುಷ!

**ರಾಮ** : ಅಹುದು ತಾಯಿ, ಅಹುದು, ರಾಮನೆಂಬರು ನನ್ನ ; ಈತ ನನ್ನನುಜ ಸೌಮಿತ್ರಿ.

**ಶಬರಿ** : ರಾಮ ಲಕ್ಷ್ಮಣರೆ ನೀವು – । ರಾಮನೇ ನೀನು ! –

**[ಶಬರಿ ತುಂಬ ಸಡಗರಗೊಳ್ಳುತ್ತಾಳೆ. ಮುಂದೆ ಮೇಳದವರು ಹಾಡುವ ಹಾಡು ಅವಳು ಗೈದ ಉಪಚಾರವನ್ನು ಬಣ್ಣಿಸುತ್ತದೆ.]**

ಕಂಡಳು ಶಬರಿ । ರಾಮ ಬಂದು ನಿಂದಿರುವುದ ॥ ಪ ॥
ಕಂಡ ಬೆರಗು ಕಳೆದ ಬಳಿಕ । ಸನಿಯಕೈದಿ ಮೈಯ ಮುಟ್ಟಿ
ಪದದಿ ಕೆಡೆದು ಕೈಯ ಕಣ್ಣಿ । ಗೊತ್ತಿಕೊಂಡು ಹನಿಯ ಸುರಿಸಿ!!
ಬನ್ನಿರೆಂದು ಗದ್ಗದಿಸುತ । ಅಯ್ಯೊ ಏನೂ ಅಣಿಯೆ ಇಲ್ಲ
ನಿನ್ನೆಯಷ್ಟು ಚೆನ್ನವಿಲ್ಲ । ಎನ್ನುತ ಬಲು ಹಂಬಲಾಂತು !!.........
ತನ್ನ ಬಗೆಯ ಬಯಕೆಯಂತೆ । ಬಗೆಯ ಬಗೆಯ ಕಂಪನಿಡುವ
ವನಮಾಲೆಯ ಕೊರಳಿಗಿಟ್ಟು । ಅಬ್ಬ ಎಂದು ಹಿಗ್ಗಿ ಹಿಗ್ಗಿ!!

ಇದು ರುಚಿ ಇದರಷ್ಟು ರುಚಿಯ । ಹಣ್ಣೆ ಇಲ್ಲ ಜಗದೊಳೆಂದು
ನಿಮಗೆ ಎಂದೆ ತಂದೆನೆಂದು । ತಾನೆ ಅವರ ಕೈಯೊಳಿತ್ತು!!
ಪೂಜೆಯಿಂದ ಸುಪ್ರಸನ್ನ । ರಾಗಿ ರಾಜಕುವರರಂದು
ಮಂದಹಾಸ ತೋರೆ, ನೋಡಿ । ಧನ್ಯಭಾವದಿಂದ ಕೂಡಿ!!

[**ಹೀಗೆ ಅವರಿಗೆ ಉಪಚಾರವನ್ನು ಮಾಡಿ ಶಬರಿ ತನ್ನ ಅಂತಸ್ಸುಖವನ್ನು ತೋರುವುದಕ್ಕೆ ಈ ತೆರ ಹಾಡಿಕೊಂಡು ನರ್ತಿಸುತ್ತಾಳೆ.**]

ಸುಖಿ ನಾ ಸುಖಿ ನಾ ಸುಖಿ ನಾನು
ಬರಿ ಸುಖಿ ಸುಮ್ಮನೆ ಸುಖಿ ನಾನು . . . ॥ ಪ ॥
ನಾನಿಲ್ಲದ ನಾನಾಗಿಹೆನು । ಆಸೆ ತೀರಿ ಹಾಯಾಗಿಹೆನು
ಹಂಬಲನಳಿದಿಹೆ ತುಂಬಿರುವೆನು ನಾ । ಸುಮ್ಮನೆಯೇ ಬಲು ಸುಖಿ ನಾನು_!! ಸುಖಿ ನಾ...

ಹೊಳೆ ಕಡಲಿಗೆ ಸೇರುವ ತೆರದಿ । ನಾವೆ ರೇವಿಗೆ ಬಹ ತೆರದಿ
ಬಗೆ ಬಗೆ ಹಾರೈಕೆಯ ಪಟವಿಳಿಸಿ । ನಿಂತಿದೆ ಮನ ಇದೆ ಬಿಡುವೆನಿಸಿ !! ಸುಖಿ ನಾ...

ನಿಮ್ಮ ನೋಡುತ ಸುಖಿ ನಾನು । ನಿಮ್ಮನೆ ನುಡಿಸುತ ಸುಖಿ ನಾನು
ನಿಮ್ಮ ತಣಿವು ನಿಮ್ಮಾನಂದದಿ ಸುಖಿ । ನಿಮ್ಮೆಡೆ ಸುಮ್ಮನೆ ಸುಖಿ ನಾನು !! ಸುಖಿ ನಾ ...

ಇಂದಾಗಿಹೆ ನಾ ಬಲು ಹಗುರ । ನೀಡಿಹುದೋ ಪರ ತನ್ನ ಕರ
ನಿನ್ನೆ ನಾಳೆ ಇನ್ನಿಲ್ಲವೆನಗೆನೆ । ಈ ನಲವೇ ಚಿರವೆಂಬ ತೆರ !!

ಸುಖಿ ನಾ ಸುಖಿ ನಾ ಸುಖಿ ನಾನು । ಬರಿ ಸುಖಿ ಸುಮ್ಮನೆ ಸುಖಿ ನಾನು !!

**ರಾಮ** : ನಿನ್ನಾದರದೊಳು ಸುಖಿ ನಾವು । ನಿನ್ನೀ ಸೊಗದೊಳು ಸುಖಿ ನಾವು
ಕಾಡಿನೊಳೀ ಸವಿ ಕಾಣುವ ಪುಣ್ಯಕೆ । ನಿನಗೆಂದೆಂದಿಗು ಋಣಿ ನಾವು !!

**ಶಬರಿ** : [**ರಾಮನ ಮಾತನ್ನು ಕೇಳಿ ತನ್ನ ಸೊಗದ ಉನ್ಮಾದವನ್ನು ಸ್ವಲ್ಪ ಹದಕ್ಕೆ ತಂದುಕೊಂಡು ಅವನನ್ನು ನೋಡುತ್ತ ಕೊನೆ ಕೊನೆಗೆ ಕಂಬನಿದುಂಬಿ**]
ಬಲು ಸಂತಸ ಬಲು ಸಂತಸ ಬಲು ಸಂತಸವೆನಗೆ
ನನ್ನಾಸೆಯ ಜಾಡ ಹಿಡಿದು ಬಂದಿರೆಲ್ಲೈ ಕೊನೆಗೆ
ದಣಿದಿರಯ್ಯ, ತಣಿದಿರಾ । ಹಸಿವು ತೃಷೆಯನುಳಿದಿರಾ ?
ಬಡವೆ, ಒಬ್ಬಳೇನಗೈವೆ, ನನಗೆ ಮರುಕ ತಳೆದಿರಾ ?

**ರಾಮ** : ಕಣ್ಣ ನೀರಿದೇಕೆ ತಾಯೆ, ತುಸವೂಣೆಯವಿಲ್ಲ
ನಮ್ಮಯೋಧ್ಯೆಯರಮನೆಯೊಳು ಇದಕು ಲೇಸು ಸಲ್ಲ.
ಇಂದು ಹಳುವ ಮರೆತೆವು । ಇಲ್ಲೆ ಮನೆಯನರಿತೆವು
ಇನಿತಾದರ ತೋರ್ವ ನಿನ್ನನಬ್ಬೆಯೆಂದೆ ಕುರಿತೆವು.

ಶಬರಿ : ರೂಪಿನಂತೆ ಮಾತು ಕೂಡ ಎನಿತುದಾರವಾಗಿದೆ!
ಧನ್ಯೆ ನಾನು ಸಿದ್ಧರ ವರವಿಂದು ನನಗೆ ಫಲಿಸಿದೆ.
ನಿಮ್ಮ ಕಂಡ ಪುಣ್ಯವಂತೆ ; । ಹಿಂಗಿಹೋಯಿತೆಲ್ಲ ಚಿಂತೆ.
ಗುರುವ ಪೂಜೆ ಗೈದ ತಣಿವು ನನಗೆ ಸಂದಿತಿಂತೆ.

ರಾಮ : ಇಂಥ ಶಿಷ್ಯೆಯರ್ತಿ ಪಡೆದ ನಿನ್ನ ಗುರುಗಳೆಂಥರೋ
ಅವರ ಮಹಿಮೆ ಕೇಳಿ ಬಲ್ಲೆ ಎಂಥ ಶಾಂತದಾಂತರೊ.
ಅಳಲನೆಲ್ಲ ಮರೆಸಿ ಶಾಂತಿಯೊಂದ ತೋರುವೀ ಬನ –
ಇದರ ನಡುವೆ ಪ್ರೇಮಶುದ್ಧೆ ನೀನು ! ಸುದಿನವೀ ದಿನ

ಶಬರಿ : ನನ್ನ ಪೊಗಳಲೇಕೆ ರಾಮ, ಎಲ್ಲ ಅವರ ಕರುಣೆ !
ನೀವಿಲ್ಲಿಗೆ ಪಾದ ಬೆಳಸಿ ನನ್ನ ಕಂಡ ಕರುಣೆ.
ನೀವು ಬಹಿರಿ ನಿಮ್ಮ ಕಾಣೆ ನಲ್ಮೆಯಹುದು ಎಂದು
ಸಿದ್ಧರೊರೆದ ಮಾತು ನನಗೆ ಸಿದ್ಧಿಯಾಯಿತಿಂದು .......

**(ಹಾಡುವಳು)**

ಕೋಟಿಕರಗಳಿಂ ರವಿಯೆತ್ತಿರುವೀ । ನೀಲದಾಚೆ ಗಮನ, ನನಗೀ
ಮಾಯೆಯಾಚೆ ಪಯಣ ॥ ಪ ॥
ಹಾರಬಯಸೆನೀ ಹಕ್ಕಿಗಳಂತೆ । ತೇಲ ಬಯಸೆನೀ ಬಿಳಿಮುಗಿಲಂತೆ
ಕಾರ್ಮೋಡವ ಸೆಳೆಮಿಂಚಿನ ತೆರದೊಳು । ಭವ ಬಿಡೆ ಬಯಸಿಹೆನಿಂತೆ !! ಕೋಟಿ ಕರಗಳಿಂ...

ರಾಮ : ಮಾತೆಯ ತೆರ ನೀನೆಮ್ಮಾದರಿಸುತ
ಬಳಿಕೀ ತೆರ ನುಡಿಯೆ_ತಾಯೇ । ನಿನಗೀ ಬಗೆ ಸರಿಯೆ !!......

ಶಬರಿ : ಪುಣ್ಯ ಲೋಕ ದೊರೆಯಲೆಂದು ಹರಕೆಯಿಡೆನಗೆ.

ರಾಮ : ಇನಿತು ಪ್ರಿಯವ ಗೈದ ನಿನಗೆ ಸಾವೆ ನಮ್ಮ ಕಾಣ್ಕೆ !

ಶಬರಿ : ಮರಣವಲ್ಲ ಮುಕ್ತಿ ಪ್ರಭೋ ಇದುವೆ ನನ್ನ ಪೂಣ್ಕೆ !

ರಾಮ : ಮನ ಒಪ್ಪಿದರೂ ಎದೆಯೊಪ್ಪದಲಾ !

ಶಬರಿ : ನೀನೊಲಿದೊಪ್ಪಲು ದಿವ ತಪ್ಪದಲಾ !

ರಾಮ : ಬೆರಗಾಗಿಹೆ ನಾ ನಿನಗೆ । ಅಸ್ತು ಎಂಬೆ ನಲ್ಮೆಗೆ
ಅಸ್ತು ಅಸ್ತು ಪೋಗವ್ವಾ ನಿನ್ನಭೀಷ್ಟ ಸಿದ್ಧಿಗೆ.

ಶಬರಿ : ನಮೋ ನಮೋ ನಿಮಗೆ ನಮೋ । ಬನಕೆ ನಮೋ ಮಲೆಗೆ ನಮೋ ಎಲ್ಲರಿಗೆಲ್ಲಕು ಶರಣು.

**(ವೇದಿಯಲ್ಲಿ ಉದ್ದೀಪ್ತವಾದ ಅಗ್ನಿಯನ್ನು ಬಲವಂದು ಹಾಡುತ್ತಾ ಪ್ರವೇಶಿಸುತ್ತಾಳೆ.)**

**ರಾಮ** : ಹೆಣ್ಣ ರೀತಿಯನರಿಯಬಹುದೇ । ಅವರ ಬಗೆ ಬಲು ಸೋಜಿಗ !
ಎಂಥ ನಿಷ್ಠೆ ಎಂಥ ಪ್ರೀತಿ । ಇವಳ ಮರೆವುದೆ ಈ ಜಗ?

**ಲಕ್ಷ್ಮಣ** : ಆರು, ಎತ್ತ, ಏಕೆ ಎನ್ನದೆ । ಹಸುಳೆಯಂದದಿ ಒಲಿದಳು
ಕಾಣುತಲೆ ಬಹು ನಲಿದಳಣ್ಣಾ । ನಲವೊಳೆಮ್ಮನೆ ಮರೆತಳು.

**ರಾಮ** : ಬೆಳಕಿಗೊಲಿದವರ್ ಉರಿವ ಬತ್ತಿಯ । ಕರುಕ ಕಾಣರು ಲಕ್ಷ್ಮಣ
ಬಾಳ ಸುತ್ತಿಹ ದೇವ ತೇಜವ । ಕಾಂಬರಿಗೆ ಇದೆ ಲಕ್ಷಣ.

**ಲಕ್ಷ್ಮಣ** : ಅಸುರನೆಡರಿಂ ಕಾದು ತನ್ನೆಡೆ– । ಗೆಮ್ಮ ಸೆಳೆದೀ ಅರ್ತಿಗೆ,
ಏನನೆಂಬೆನು ಅಣ್ಣ, ಇಂತೆಯೆ । ನೆನೆಯುತಿರಬಹುದತ್ತಿಗೆ.

ರಾಮ : ಇರಬಹುದು ಇರಬಹುದು–ಸೀತೇ । ಹಾ ಪ್ರಿಯೇ ಚಂದ್ರಾನನೇ !
ಎಲ್ಲಿರುವೆ,ಎಂತಿರುವೆ, ನಿನ್ನನು । ಜೀವದೊಂದಿಗೆ ಕಾಂಬೆನೇ?

ಲಕ್ಷ್ಮಣ : ಭೂಮಿ ತಾಯಿಯು ತನ್ನ ಮಗಳನು । ಎಲ್ಲಿರಲಿ ಅದೆ ತವರೆನೆ
ಪೊರೆವಳ್ಳೆ, ಧೃತಿಯಾನು, ಚಿಂತಿಸು । ಇನ್ನು ಮುಂದಿನ ಹವಣನೆ.

ರಾಮ : ಅಹುದಹುದು ಮರೆತಿದ್ದೆ ಲಕ್ಷ್ಮಣ । ಪಂಚಭೂತದಿ ಬೆರೆಯುತ
ಶಬರಿ ಸೀತೆಗೆ ರಕ್ಷೆಯಿಡಲಿ । ಪೋಪ ಬಾ ನೆರವರಸುತ.

– ತೆರೆ –

## ಕರ್ತೃ–ಭಾವ–ಆಕರ



**ಪು.ತಿ.ನ,** ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಪುರೋಹಿತ ತಿರುನಾರಾಯಣಯ್ಯಂಗಾರ್ಯ ನರಸಿಂಹಾಚಾರ್ಯ (ಕ್ರಿ.ಶ.೧೯೦೫) ಇವರು ಮಂಡ್ಯಜಿಲ್ಲೆ ಮೇಲುಕೋಟೆಯವರು. ಕನ್ನಡ ವಿಶ್ವಕೋಶದ ಭಾಷಾಂತರಕಾರರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟು ಸಂಪಾದಕರಾಗಿ ಸೇವೆಸಲ್ಲಿಸಿದ್ದಾರೆ.

ಕನ್ನಡ ನವೋದಯದ ಪ್ರಮುಖ ಕವಿಗಳಲ್ಲಿ ಒಬ್ಬರಾದ ಪು.ತಿ.ನ. ಅವರು ಗದ್ಯನಾಟಕ, ಕವಿತೆ, ಸಣ್ಣಕತೆ, ಪ್ರಬಂಧ, ವಿಚಾರಸಾಹಿತ್ಯ ಮೊದಲಾದ ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿದ್ದಾರೆ. ಗೀತನಾಟಕ ಇವರ ಪ್ರಾತಿನಿಧಿಕ ಪ್ರಕಾರ, **ಅಹಲ್ಯೆ, ಶಬರಿ, ವಿಕಟಕವಿವಿಜಯ, ಹಂಸದಮಯಂತಿ ಮತ್ತು ಇತರ ರೂಪಕಗಳು, ಹಣತೆ, ರಸಸರಸ್ವತಿ, ಗಣೇಶದರ್ಶನ, ಶಾರದಯಾಮಿನಿ, ಶ್ರೀಹರಿಚರಿತೆ, ರಥಸಪ್ತಮಿ** ಇವರ ಪ್ರಮುಖ ಕೃತಿಗಳು. **ಹಂಸದಮಯಂತಿ ಮತ್ತು ಇತರ ರೂಪಕಗಳು ಕೃತಿಗೆ ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಶ್ರೀಹರಿಚರಿತೆ ಕಾವ್ಯಕೃತಿಗೆ ಪಂಪಪ್ರಶಸ್ತಿ** ಲಭಿಸಿದೆ. ಮೈಸೂರು ವಿಶ್ವವಿದ್ಯಾನಿಲಯ **ಗೌರವ ಡಿ.ಲಿಟ್.** ಪದವಿ ನೀಡಿ ಗೌರವಿಸಿದೆ. ಚಿಕ್ಕಮಗಳೂರಿನಲ್ಲಿ ೧೯೮೪ರಲ್ಲಿ ಸಮಾವೇಶಗೊಂಡ ೫೬ನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

[ಆಧಾರ : ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಷಯ ವಿಶ್ವಕೋಶ]

ಶಬರಿ ಗೀತನಾಟಕ ರಾಮಾಯಣ ಮಹಾಕಾವ್ಯವನ್ನು ಆಧರಿಸಿದೆ. ತನ್ನ ಆರಾಧ್ಯ ಪುರುಷನ ದರ್ಶನದಿಂದ ಕೃತಾರ್ಥಳಾಗುವೆನೆಂಬ ಭಾವದಿಂದ ಶಬರಿ ಶ್ರೀರಾಮನಿಗಾಗಿ ಹಂಬಲಿಸಿ ಕಾತರಿಸುತ್ತಾಳೆ. ಶ್ರೀರಾಮದರ್ಶನ ಆಕೆಗೆ ಧನ್ಯತೆಯನ್ನು ತಂದು ಕೊಡುತ್ತದೆ. ರಾಮಲಕ್ಷ್ಮಣರನ್ನು ಆದರ ಆತಿಥ್ಯದಿಂದ ಸತ್ಕರಿಸಿ. ಗೌರವಿಸಿದ ಶಬರಿ ತನ್ನ ಬಾಳಿನ ಹಂಬಲ ತೀರಿದನಂತರ ಬಾಳು ಅರ್ಥಹೀನವೆಂದು ಭಾವಿಸಿ, ಮುಕ್ತಿಗಾಗಿ ಪ್ರಯತ್ನಿಸುವ ಸಂವೇದನೆಗೆ ಒಳಗಾಗುತ್ತಾಳೆ. ಶಬರಿಯ ಮುಗ್ಧತೆ, ಶ್ರೀರಾಮನ ಸರಳ, ಸಜ್ಜನಿಕೆ, ಹಿತ–ಮಿತ ಮೃದುವಚನ, ಲಕ್ಷ್ಮಣನ ವಿನಯದ ಸಹಚರತೆ ಮನೋಜ್ಞವಾಗಿ ಇಲ್ಲಿ ಮೂಡಿ ಬಂದಿದೆ.

ಪು.ತಿ.ನ. ವಿರಚಿತ **'ಶಬರಿ'** ಗೀತನಾಟಕವನ್ನು ಶ್ರೀರಂಗ ಮತ್ತು ನಾ.ಕಸ್ತೂರಿ ಸಂಪಾದಿಸಿರುವ ಏಕಾಂಕನಾಟಕಗಳು ಕೃತಿಯಿಂದ ಆಯ್ದು, ಸಂಪಾದಿಸಿ, ನಿಗದಿಪಡಿಸಲಾಗಿದೆ.

## ಪೂರ್ವಕಥೆ

ರಾಮಾಯಣ ಮಹಾಕಾವ್ಯವು ಭಾರತೀಯರ ಪವಿತ್ರ ಗ್ರಂಥಗಳಲ್ಲಿ ಒಂದು. ಶ್ರೀರಾಮನ ಗುಣ ಸ್ವಭಾವಗಳ ಸೆಳತಕ್ಕೆ ಸಿಕ್ಕಿ ಅವನನ್ನು ಕಾಣುವುದೆ ಜೀವನದ ಏಕೈಕ ಗುರಿ ಎಂದು ಭಾವಿಸಿದ್ದ ಅಸಂಖ್ಯಾತ ಭಕ್ತರಲ್ಲಿ ಶಬರಿಯೂ ಒಬ್ಬಳು. ಈಕೆ ಮತಂಗ ಋಷಿಯ ಆಶ್ರಮದಲ್ಲಿದ್ದವಳು. ಮತಂಗರು ದಿವ್ಯಲೋಕವನ್ನು ಸೇರಿದ ಬಳಿಕ ರಾಮಧ್ಯಾನದಲ್ಲಿ ತೊಡಗಿ ರಾಮನ ದರ್ಶನಕ್ಕಾಗಿ ಕಾದಿದ್ದಳು. ಸೀತಾಪಹರಣದ ಅನಂತರ ಶೋಕತಪ್ತರಾದ ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಿರುವಾಗ ತಪಸ್ವಿಗಳಾದ **ದನು** ಎಂಬವರ ಸೂಚನೆಯಂತೆ ಮತಂಗಾಶ್ರಮವನ್ನು ಪ್ರವೇಶಿಸುತ್ತಾರೆ. ಅಲ್ಲಿ ಶ್ರೀರಾಮನ ಬರುವಿಕೆಗಾಗಿ ಕಾದು ಕಾದು ಕಾತರಿಸಿ ಮುಪ್ಪಾಗಿ ಭಕ್ತಿಯೆ ರೂಪುಗೊಂಡಂತೆ ಇದ್ದ ಶಬರಿಯನ್ನು ದರ್ಶಿಸುತ್ತಾರೆ. ತನ್ನ ಆರಾಧ್ಯದೈವ ಶ್ರೀರಾಮನನ್ನು ಕಂಡು ಆನಂದಿಸಿ, ಧನ್ಯತೆಯ ಭಾವನೆಯಿಂದ ಮುಕ್ತಿಯನ್ನು ಬಯಸಿದ ಶಬರಿಗೆ ಶ್ರೀರಾಮನು ಮುಕ್ತಿಯನ್ನು ಕರುಣಿಸಿದ ಸಂದರ್ಭವೇ ಈ ಗೀತ ನಾಟಕ.



## ಪದವಿಂಗಡಣಾ ಓದು

ನೀನು + ಎಂದು + ಐತರುವೆ ; ನಿನ್ನ + ಎಡೆಗೆ + ಐದುವೆ ; ನಾನು + ಎರೆವೆ; ತೇಜಕೆ + ಎಡೆ; ಈಕೆಗೆ + ಎನ್ನಿಂದ; ಬೀಡು + ಇಲ್ಲಿ; ನಮ್ಮ + ಅಯೋಧ್ಯೆಯ + ಅರಮನೆಯೊಳು; ಇನಿತು + ಆದರ; ಎನಿತು + ಉದಾರ ; ನಿನ್ನ + ಅಭೀಷ್ಟ ; ತನ್ನ + ಎಡೆಗೆ + ಎಮ್ಮ; ನೆನೆಯುತ + ಇರಬಹುದು + ಅತ್ತಿಗೆ ; ಧೃತಿಯ + ಆನು.

## ಪದ– ಅರ್ಥ

ಚೀರ (ತ್ಸ) – ಸೀರೆ (ದ್ಭ) – ನಾರುಬಟ್ಟೆ, ಎಡೆ – ಸ್ಥಳ, ಬಳಿ – ದಾರಿ, ಅರಿ – ತಿಳಿ, ನೆಚ್ಚು – ನಂಬು, ಬಯಕೆ – ಇಚ್ಛೆ, ಭೂಮಿಜಾತೆ – ಸೀತೆ, ಎರೆ – ಬೇಡು, ಪ್ರಾರ್ಥಿಸು, ಬೇಗೆ – ದು:ಖವೆಂಬ ಬೆಂಕಿ, ತೇಜ – ಕಾಂತಿ, ಉಲ್ಕೆ – ಆಕಾಶದಿಂದ ಭೂಮಿಗೆ ಬೀಳುವ ತೇಜ:ಪುಂಜವಾದ ಆಕಾಶಕಾಯ, ಶ್ರಮಣಿ – ತಪಸ್ವಿನಿ, ಮರುಳು – ಮೋಡಿ, ಬನ್ನ – ಕಷ್ಟ, ತೊಂದರೆ. ಸವಿ – ಸಿಹಿ, ಕಡು – ಅತಿ, ಮಧುಕರ – ದುಂಬಿ, ಮಧುಪರ್ಕ – ಅತಿಥಿಗಳಿಗೆ ನೀಡುವ ಮೊಸರು, ತುಪ್ಪ, ನೀರು, ಜೇನುತುಪ್ಪ, ಸಕ್ಕರೆ

ಮಿಶ್ರಿತ ಪಾನೀಯ, ಪೆರೆ – ಚಂದ್ರ, ಅರ್ತಿ – ಪ್ರೀತಿ, ಸುರಭಿ – ಕಾಮಧೇನು, ದಿಟ್ಟಿ (ದ್ಭ)– ದೃಷ್ಟಿ (ತ್ಸ), ತವಸಿ(ದ್ಭ) – ತಪಸ್ವಿ(ತ್ಸ), ಬೆರಗು – ಆಶ್ಚರ್ಯ, ಸನಿಯ – ಸಮೀಪ. ಐದಿ – ಹೋಗಿ, ಪದ – ಪಾದ, ಅಣಿ – ಸಿದ್ಧತೆ, ಕಂಪು – ಸುವಾಸನೆ, ರೇವು – ಬಂದರು, ತಣಿವು – ತೃಪ್ತಿ, ಚಿರ – ಶಾಶ್ವತ, ಆದರ – ಪ್ರೀತಿ, ತೃಷೆ – ಬಾಯಾರಿಕೆ, ತುಸ–ಸ್ವಲ್ಪವೂ; ಊಣೆಯ–ಕೊರತೆ; ಲೇಸು – ಉತ್ತಮ, ಹಳು– ಕಾಡು, ಅಬ್ಬೆ – ತಾಯಿ, ಅಳಲು – ದು:ಖ, ಪೊಗಳು – ಹೊಗಳು, ನಲ್ಮೆ – ಪ್ರೀತಿ, ಸಿದ್ಧ – ತಪಸ್ವಿ, ಕರ – ಕೈ, ಕರುಕ – ಉರಿದ ಬತ್ತಿಯ ಕಪ್ಪು ಭಾಗ, ಆನನ – ಮುಖ, ಧೃತಿ – ಧೈರ್ಯ, ಹವಣು – ಸಿದ್ಧತೆ, ನೆರವು – ಸಹಾಯ: ಅಸುರ – ರಾಕ್ಷಸ, ಆನು – ತಾಳು, ಎಂಥರೋ – ಎಂತಹವರೋ, ವೇದಿ–ಹೋಮ ನಡೆಯುವ ಸ್ಥಳ, ಬಂಬಲ – ಗುಂಪು.

## ಪಠ್ಯಾಧಾರ ಟಿಪ್ಪಣಿ

**ಶಬರಿ** : ವಿಂಧ್ಯಾಟವಿಯ ಭಿಲ್ಲರೊಡೆಯನ ಮಗಳಾದ ಶಬರಿ ಪ್ರಾಯಪ್ರಬುದ್ಧಳಾದಾಗ ಆಕೆಯ ತಂದೆ ತನ್ನ ಸಮುದಾಯದ ತರುಣನೊಡನೆ ಮದುವೆ ಮಾಡಲು ನಿರ್ಧರಿಸುತ್ತಾನೆ. ಮದುವೆಯ ದಿನದ ಭೋಜನಕ್ಕಾಗಿ ಹಿಂದಿನ ರಾತ್ರಿ ಅನೇಕ ಕುರಿ, ಆಡುಗಳನ್ನು ಕೊಲ್ಲುತ್ತಿರುವಾಗ ಅವುಗಳ ಚೀತ್ಕಾರವನ್ನು ಕೇಳಿದ ಶಬರಿ ದುಃಖಿತಳಾಗುತ್ತಾಳೆ. ತನ್ನ ಮದುವೆಯ ಸಂಭ್ರಮಕ್ಕಾಗಿ ಅಷ್ಟೊಂದು ಸಾಧು ಪ್ರಾಣಿಗಳ ಕೊಲೆಯಾದುದಕ್ಕೆ ಮನನೊಂದು ರಾತ್ರೋ ರಾತ್ರಿ ಮನೆ ಬಿಟ್ಟು ಕಾಡುದಾರಿಯಲ್ಲಿ ಓಡುತ್ತಾ ಬೆಳಗಾಗುವಾಗ ಮತಂಗ ಮುನಿಗಳ ಆಶ್ರಮ ಸೇರುತ್ತಾಳೆ.

**ಮತಂಗ** : ಒಬ್ಬ ಬ್ರಹ್ಮರ್ಷಿ. ಋಷ್ಯಮೂಕ ಪರ್ವತದ ಬಳಿ ತಪಸ್ಸು ಮಾಡಿಕೊಂಡಿದ್ದ, ವಾಲಿಯು ದುಂದುಭಿಯೆಂಬ ರಕ್ಕಸನನ್ನು ಕೊಂದು ಮದೋನ್ಮತ್ತನಾಗಿ ಕಳೇಬರವನ್ನು ಆಶ್ರಮಕ್ಕೆ ಎಸೆದಾಗ ಋಷ್ಯಾಶ್ರಮವು ಕಲುಷಿತಗೊಂಡಿತು. ಇದರಿಂದ ಕ್ರುದ್ಧನಾದ ಮತಂಗಮುನಿ ವಾಲಿಯು ಈ ಆಶ್ರಮವನ್ನು ಪ್ರವೇಶ ಮಾಡಿದರೆ ಸಾವು ಸಂಭವಿಸಲಿ ಎಂದು ಶಪಿಸಿದ. ವಾಲಿಯಿಂದ ಭಯಗ್ರಸ್ತನಾಗಿದ್ದ ಸುಗ್ರೀವ ಇಲ್ಲಿ ನೆಲೆಸಿದ್ದನು. ಶಬರಿಯು ಮತಂಗರ ಆಶ್ರಮದಲ್ಲಿದ್ದಳು.

**ಭೂಮಿಜಾತೆ** : ಭೂಮಿಯ ಮಗಳು. ಜನಕ ಮಹಾರಾಜನು ಸಂತಾನ ಫಲಕ್ಕಾಗಿ ಪುತ್ರಕಾಮೇಷ್ಠಿ ಮಾಡಿ ಮಿಥಿಲೆಯಲ್ಲಿ ಭೂಮಿಯನ್ನು ಉಳುಮೆ ಮಾಡುತ್ತಿದ್ದಾಗ ದೊರೆತ ಶಿಶುವೆ ಸೀತೆ. ಹೀಗಾಗಿ ಸೀತೆಗೆ ಭೂಮಿಜಾತೆಯೆಂದು ಮತ್ತೊಂದು ಹೆಸರು.

**ಚಿತ್ರಕೂಟ** : ಒಂದು ಪರ್ವತ. ಉತ್ತರ ಭಾರತದ ಪಯೋಷ್ಣಿ ನದಿಯ ಪಕ್ಕದಲ್ಲಿದೆ. ಶ್ರೀರಾಮನು ಸೀತಾಲಕ್ಷ್ಮಣರೊಂದಿಗೆ ಅರಣ್ಯವಾಸಕ್ಕೆ ಹೊರಟಾಗ ಮೊತ್ತಮೊದಲು ಇಲ್ಲಿ ಆಶ್ರಮವನ್ನು ಕಟ್ಟಿಕೊಂಡನು. ಭರತನು ಶ್ರೀರಾಮನನ್ನು ಭೇಟಿಯಾಗಿ ಆತನ ಪಾದುಕೆಗಳನ್ನು ಇಲ್ಲಿ ಪಡೆದನು.

**ದಶರಥ** : ಅಯೋಧ್ಯೆಯ ಅರಸು. ರಾಮ, ಲಕ್ಷ್ಮಣ, ಭರತ, ಶತ್ರುಘ್ನ ಈತನ ಮಕ್ಕಳು. ಕೌಸಲ್ಯೆ, ಸುಮಿತ್ರೆ, ಕೈಕೆ ಈತನ ಮಡದಿಯರು.

**ಸೌಮಿತ್ರಿ** : ದಶರಥನ ಎರಡನೆಯ ಮಡದಿಯಾದ ಸುಮಿತ್ರೆಯ ಮಗ ಲಕ್ಷ್ಮಣ. ಸುಮಿತ್ರೆಯ ಮಗನಾದುದರಿಂದ ಸೌಮಿತ್ರಿ ಎಂದು ಈತನನ್ನು ಕರೆಯುತ್ತಾರೆ.

**ದನು** : ದಂಡಕಾರಣ್ಯದಲ್ಲಿ ವಾಸಮಾಡುತ್ತಿದ್ದ **ಕಬಂಧ** ಎಂಬ ಹೆಸರಿನ ರಾಕ್ಷಸ. ಹಿಂದಣ ಜನ್ಮದಲ್ಲಿ **ವಿಶ್ವಾವಸು** ಎಂಬ ಗಂಧರ್ವನಾಗಿದ್ದ. ಈತ **ಸ್ಥೂಲಶಿರ**ನೆಂಬ ಮುನಿಯನ್ನು ಅಪಮಾನಿಸಿದ್ದರಿಂದ ರಾಕ್ಷಸನಾಗಿ ಜನಿಸಿದ. ಒಮ್ಮೆ ಇಂದ್ರನ ವಜ್ರಾಯುಧದ ಪ್ರಹಾರದಿಂದ ಇವನ ಮುಖಕುಸಿದು ಹೊಟ್ಟೆಯೊಳಗೆ ಸೇರಿಕೊಂಡಿತು. ಹಾಗಾಗಿ ಈತನಿಗೆ **ಉದರಮುಖ** ಎಂಬ ಹೆಸರುಬಂತು. ರಾಮಲಕ್ಷ್ಮಣರಿಂದ ಈತನಿಗೆ ಶಾಪವಿಮೋಚನೆಯಾಯ್ತು. ಶಬರಿಯ ವೃತ್ತಾಂತವನ್ನು ರಾಮನಿಗೆ ತಿಳಿಸಿದ ಈತ ಸುಗ್ರೀವನಲ್ಲಿ ಸಖ್ಯಮಾಡಿ ಸೀತೆಯನ್ನು ಮರಳಿ ಪಡೆಯಬಹುದು ಎಂಬ ಸಲಹೆಯನ್ನು ನೀಡುತ್ತಾನೆ.

**ಜಟಿಲಕಬರಿ** : ಜಟಿಲ–ಜಡೆಯಾಕಾರದ, ಕಬರಿ – ತುರುಬು = ಜಡೆಯಾಕಾರದ ತುರುಬುಳ್ಳವಳು –ಶಬರಿ.

**ಮೇಳ** : ನಾಟಕಗಳಲ್ಲಿ ಹಾಡುವುದಕ್ಕಾಗಿ ಇರುವ ಒಂದು ವರ್ಗ. ಹಿಮ್ಮೇಳ ಸಹಿತ ಇವರು ರಂಗದಲ್ಲಿ ಕಾಣಿಸಿಕೊಂಡು ನಾಟಕದ ಸನ್ನಿವೇಶಕ್ಕೆ ತಕ್ಕಂತೆ ಹಾಡುತ್ತಾರೆ.

**ಬಲವಂದು** : ಪ್ರದಕ್ಷಿಣಾಕಾರವಾಗಿ (ಎಡದಿಂದ ಬಲಕ್ಕೆ) ಸುತ್ತುಬಂದು ಎಂದರ್ಥ. ದೇವರಿಗೆ, ತುಳಸಿಕಟ್ಟೆಗೆ, ಕಾಮಧೇನು, ಕಲ್ಪವೃಕ್ಷಗಳಿಗೆ, ಹೋಮಕುಂಡ ಮುಂತಾದವುಗಳಿಗೆ ಸುತ್ತುವರಿಯುವಾಗ ಅವು ನಮ್ಮ ಬಲಭಾಗದಲ್ಲಿರುವಂತೆ ಸುತ್ತುವರಿಯಬೇಕು. ಆಗ ಅದು ಪ್ರದಕ್ಷಿಣೆಯಾಗುತ್ತದೆ. ಸುತ್ತುವರಿಯಬೇಕಾದ ವಸ್ತುವನ್ನು ಎಡಭಾಗದಲ್ಲಿರುವಂತೆ ಸುತ್ತುವರಿದರೆ (ಎಡಬಂದು) ಅದು ಅಪ್ರದಕ್ಷಿಣೆಯಾಗುತ್ತದೆ.



## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧. ಶ್ರೀರಾಮನ ತಂದೆಯ ಹೆಸರೇನು?

೨. ಶ್ರೀರಾಮನಿಗೆ ಸಮರ್ಪಿಸಲು ಶಬರಿ ಏನನ್ನು ಸಂಗ್ರಹಿಸಿದ್ದಳು ?

೩. ಮತಂಗಾಶ್ರಮದಲ್ಲಿ ವಾಸವಿದ್ದ ತಪಸ್ವಿನಿ ಯಾರು?

೪. ರಾಮಲಕ್ಷ್ಮಣರಿಗೆ ಮತಂಗಾಶ್ರಮಕ್ಕೆ ಹೋಗಲು ಸೂಚಿಸಿದವರು ಯಾರು?

೫. **'ಶಬರಿ'** ಗೀತನಾಟಕದ ಕರ್ತೃ ಯಾರು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು/ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ರಾಮನು ಗಿರಿವನವನ್ನು ಏನೆಂದು ಪ್ರಾರ್ಥಿಸಿದನು?

೨. ಲಕ್ಷ್ಮಣನು ಅಣ್ಣನನ್ನು ಹೇಗೆ ಸಂತೈಸಿದನು?

೩. ರಾಮನ ಸ್ವಾಗತಕ್ಕಾಗಿ ಶಬರಿ ಮಾಡಿಕೊಂಡಿದ್ದ ಸಿದ್ಧತೆಗಳೇನು?

೪. ಶಬರಿಯು ರಾಮಲಕ್ಷ್ಮಣರನ್ನು ಉಪಚರಿಸಿದ ರೀತಿಯನ್ನು ವಿವರಿಸಿ.

೫. ಆತಿಥ್ಯ ಸ್ವೀಕರಿಸಿದ ರಾಮಲಕ್ಷ್ಮಣರು ಶಬರಿಗೆ ಏನು ಹೇಳಿದರು?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು–ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಶಬರಿಯ ಚಿಂತೆ ಹಿಂಗಿಹೋದ ಸಂದರ್ಭದ ಸ್ವಾರಸ್ಯವನ್ನು ವಿವರಿಸಿ

೨. ಶಬರಿಯ ಸಡಗರ, ಸಂತೋಷ ಮೇಳದವರ ಹಾಡಿನಲ್ಲಿ ಹೇಗೆ ವರ್ಣಿತವಾಗಿದೆ?

೩. ನಂಬಿಕೆಟ್ಟವರಿಲ್ಲ ಎಂಬ ಮಾತು ಶಬರಿಯ ಪಾಲಿಗೆ ಹೇಗೆ ನಿಜವಾಗಿದೆ?

**ಈ. ಸಂದರ್ಭದೊಂದಿಗೆ ಸ್ವಾರಸ್ಯವನ್ನು ಬರೆಯಿರಿ.**

೧. "ಆವುದೀ ಮರುಳು? ನಮ್ಮೆಡೆಗೆ ಬರುತಿಹುದು"

೨. "ನಾಚುತಿಹೆನೀ ಪೂಜ್ಯೆಯೀ ನಲುಮೆಯಿಂದ"

೩. "ತಾಯಿ, ದಾರಿಗರಿಗೆ ಬೀಡಿಲ್ಲಿ ದೊರೆಯುವುದೇ?"

೪. "ರೂಪಿನಂತೆ ಮಾತು ಕೂಡ ಎನಿತುದಾರವಾಗಿದೆ!"

೫. "ಬೆಳಕಿಗೊಲಿದವರ್ ಉರಿವ ಬತ್ತಿಯ ಕರುಕ ಕಾಣರು."



**ಉ. ಹೊಂದಿಸಿ ಬರೆಯಿರಿ**

| | ಅ | ಬ |
|---|---|---|
| ೧. | ಮತಂಗ | ಸೀತೆ |
| ೨. | ಪು.ತಿ.ನ. | ಆಶ್ರಮ |
| ೩. | ದಶರಥ | ಮೇಲುಕೋಟೆ |
| ೪. | ಚಿತ್ರಕೂಟ | ಪರ್ವತ |
| ೫. | ಭೂಮಿಜಾತೆ | ರಾಮ |
| | | ಅರಣ್ಯ |

# ಸೈದ್ಧಾಂತಿಕ ಭಾಷಾಭ್ಯಾಸ

ಈಗಾಗಲೇ ಎಂಟು ಮತ್ತು ಒಂಬತ್ತನೆಯ ತರಗತಿಗಳಲ್ಲಿ ವ್ಯಾಕರಣ, ಛಂದಸ್ಸು ಅಲಂಕಾರಗಳಲ್ಲಿ ಬಹುತೇಕ ಅಂಶಗಳನ್ನು ತಿಳಿದುಕೊಳ್ಳಲಾಗಿದೆ. ಅವುಗಳ ಪುನರವಲೋಕನದೊಂದಿಗೆ ಉಳಿದ ಅಂಶಗಳನ್ನು ತಿಳಿದುಕೊಳ್ಳೋಣ.






## ಗುಣಿತಾಕ್ಷರಗಳು

ಒಂದು ವ್ಯಂಜನಕ್ಕೆ ಒಂದು ಸ್ವರ ಸೇರಿ ಆಗುವ ಅಕ್ಷರವನ್ನು ಗುಣಿತಾಕ್ಷರ ಎಂದು ಕರೆಯುತ್ತಾರೆ.

**ಉದಾ :** ಕ್+ಅ= ಕ ; ಕ್+ಆ=ಕಾ ; ಯ್+ಉ=ಯು ಇತ್ಯಾದಿ. ಹೀಗೆ ಒಂದು ವ್ಯಂಜನಕ್ಕೆ ೧೩ ಸ್ವರಗಳನ್ನು ಎರಡು ಯೋಗವಾಹಗಳನ್ನು ಸೇರಿಸಿ ಗುಣಿತಾಕ್ಷರಗಳನ್ನು ಮಾಡಲಾಗುತ್ತದೆ.

## ಸಂಯುಕ್ತಾಕ್ಷರಗಳು

ಎರಡು ಅಥವಾ ಎರಡಕ್ಕಿಂತ ಹೆಚ್ಚು ವ್ಯಂಜನಗಳಿಗೆ ಒಂದು ಸ್ವರ ಸೇರಿ ಆಗುವ ಅಕ್ಷರವನ್ನು ಸಂಯುಕ್ತಾಕ್ಷರ ಅಥವಾ ಒತ್ತಕ್ಷರ ಎಂದು ಕರೆಯಲಾಗುತ್ತದೆ.

ಇದರಲ್ಲಿ ಸಜಾತೀಯ ಮತ್ತು ವಿಜಾತೀಯ ಸಂಯುಕ್ತಾಕ್ಷರ ಎಂದು ಎರಡು ವಿಧಗಳಿವೆ.

**ಸಜಾತೀಯ ಸಂಯುಕ್ತಾಕ್ಷರಗಳು** – ಅಪ್ಪ, ಅಕ್ಕ, ಅಜ್ಜ, ಕಜ್ಜ ಇತ್ಯಾದಿ

**ವಿಜಾತೀಯ ಸಂಯುಕ್ತಾಕ್ಷರಗಳು** – ಉಷ್ಣ, ಅಸ್ತ್ರ, ಅಕ್ಷರ ಇತ್ಯಾದಿ

## ಕನ್ನಡ ಅಂಕೆಗಳು

ಭಾರತೀಯ ಭಾಷೆಗಳಲ್ಲಿ ಬಹುತೇಕ ಭಾಷೆಗಳು ಸ್ವಂತ ಅಂಕೆಗಳನ್ನು ಹೊಂದಿವೆ. ೧, ೨, ೩ ಇತ್ಯಾದಿಗಳು ಕನ್ನಡದ ಅಂಕೆಗಳು. ಹಾಗೆಯೇ ಕಾಲು, ಅರ್ಧ, ಮುಕ್ಕಾಲು ಎಂಬುದನ್ನು ಸೂಚಿಸಲೂ ಕನ್ನಡದಲ್ಲಿ ಪ್ರತ್ಯೇಕ ಸಂಕೇತಗಳಿವೆ. । (ಕಾಲು) ॥ (ಅರ್ಧ) ||| (ಮುಕ್ಕಾಲು) ಇವೇ ಆ ಸಂಕೇತಗಳು.

## ಪ್ರಬಂಧ ರಚನೆ

ಯಾವುದಾದರೊಂದು ಸೂಕ್ತ ವಿಷಯವನ್ನು ಆರಿಸಿಕೊಂಡು ಅದಕ್ಕೆ ಸಂಬಂಧಿಸಿದಂತೆ ವಿವೇಚಿಸುತ್ತ ಹತ್ತಾರು ವಾಕ್ಯವೃಂದಗಳನ್ನು ಬರೆಯಬಹುದು. ಇಂತಹ ಬರೆಹವು ಅಖಂಡವಾಗಿ ಕಲಾತ್ಮಕವಾಗಿ ಅನುಭವಪೂರ್ವಕವೆಂಬಂತೆ ಸುಂದರವಾಗಿ ರೂಪಿತಗೊಳ್ಳುವುದನ್ನು **ಪ್ರಬಂಧ** ಎನ್ನಬಹುದು. ಆಯ್ಕೆ ಮಾಡಿದ ವಿಷಯದ ಬಗ್ಗೆ ತೂಕವಾಗಿ, ಲಘುವಾಗಿ ಬರೆಯುವುದು. ಅವರವರ ಮನೋಧರ್ಮ, ಅನುಭವ, ಸಂಸ್ಕಾರಗಳ ಮೇಲೆ ಅನ್ವಯಿಸುತ್ತದೆ. **ಗಡಿಯಾರ, ವಿಮಾನ, ಪೆನ್ನು** ಮುಂತಾದ ವಿಷಯಗಳ ಬಗ್ಗೆ ಪ್ರಬಂಧಗಳನ್ನು ಬರೆಯುವುದಾದರೆ ಅವು ವಸ್ತುನಿಷ್ಠ ಪ್ರಬಂಧಗಳೆನಿಸುತ್ತವೆ. ಇಂತಹ ಪ್ರಬಂಧಗಳನ್ನು ಹತ್ತಾರು ಮಂದಿ ಬರೆದರೂ ಎಲ್ಲವೂ ಒಂದೇ ತೆರನಾಗಿರುತ್ತವೆ. ವಿಚಾರ ವೈವಿಧ್ಯವಿರುವುದಿಲ್ಲ. **'ಮಳೆ ಬಂದ ಮಾರನೆಯದಿನ', 'ಅವನಕರವಸ್ತ್ರ', 'ಆಪಾರ್ಕಿನಲ್ಲಿ'** ಮುಂತಾದ ವಿಷಯಗಳ ಕುರಿತು ಬರೆದಾಗ ಬರೆಹಗಾರನ ಅನುಭವದ ಇತಿಮಿತಿಗಳು ವ್ಯಕ್ತವಾಗುತ್ತವೆ. ನಿರೂಪಣೆಯಲ್ಲಿ ಹೊಸಹೊಸ ಭಾವನೆಗಳನ್ನು ನಿರೀಕ್ಷಿಸಬಹುದು. **'ಸಾರಿಗೆ ರಾಷ್ಟ್ರೀಕರಣ', 'ವ್ಯವಸಾಯ ಯೋಜನೆಗಳು', 'ಶಿಕ್ಷಣಮಾಧ್ಯಮ'** ಮುಂತಾದವು ವಿಚಾರಪರಪ್ರಬಂಧಗಳು. ಹಾಗಾಗಿ ಪ್ರಬಂಧಗಳನ್ನು **ವಸ್ತುನಿಷ್ಠ, ಭಾವನಿಷ್ಠ** ಮತ್ತು **ವಿಚಾರಪರ** ಎಂಬುದಾಗಿ ವಿಂಗಡಿಸಬಹುದು.

ಹಿಂದೆ ಕಾವ್ಯ, ಮಹಾಕಾವ್ಯಗಳನ್ನು ಪ್ರಬಂಧಗಳೆಂದೇ ಕರೆಯುತ್ತಿದ್ದರು. ಆದರೆ ಇಂದು ಖಚಿತವಾಗಿ ಗದ್ಯಪ್ರಾಕಾರದಲ್ಲಿ ಪ್ರಬಂಧ ಸಾಹಿತ್ಯವೇ ಹುಲುಸಾಗಿ ಬೆಳೆಯುತ್ತ ಬಂದು ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಒಂದೆನಿಸಿ ತನ್ನದೇ ಆದ ವಿಶಿಷ್ಟ ಸ್ಥಾನ ಪಡೆದಿದೆ. ಪ್ರಬಂಧಕಾರನು ಸಹೃದಯನನ್ನು ಆತ್ಮೀಯ ಗೆಳೆಯನಂತೆ ಮಾಡಿಕೊಂಡು ತನ್ನ ವಿಚಾರಗಳೆಡೆಗೆ ಕರೆದೊಯ್ಯುವನು. ಅಷ್ಟರಮಟ್ಟಿಗೆ ಆತನಿಗೆ ಸ್ವಾತಂತ್ರ್ಯವಿದೆ.

ಪ್ರಬಂಧರಚನೆಗೆ ಸೂಕ್ತ ವಿಷಯವನ್ನು ಮೊದಲು ಆಯ್ಕೆಮಾಡಿಕೊಳ್ಳಬೇಕು. ಬಳಿಕ **ಪೀಠಿಕೆ, ವಿಷಯನಿರೂಪಣೆ, ಉಪಸಂಹಾರ** ಎಂಬ ಮೂರು ವಿಭಾಗಗಳಲ್ಲಿ ಬರೆವಣಿಗೆ ಸಾಗಬೇಕು. ಹೀಗೆ ಬರೆವಣಿಗೆ ಸಾಗುತ್ತಿರುವಾಗ ಪ್ರಬಂಧದ ಅಖಂಡತೆಗೆ ತೊಡಕಾಗಬಾರದು, ಭಾವನೆಗಳು ಕಲಸುಮೇಲೋಗರವಾಗಬಾರದು. ಅಂತೆಯೇ ಭಾಷೆಯೂ ಸ್ಪಷ್ಟ ಶುದ್ಧವಾಗಿರಬೇಕು.

ವಿಷಯ ನಿರೂಪಣಾವಿಧಾನ ಗಂಭೀರವಾಗಿಯೂ ಇರಬೇಕು, ಸನ್ನಿವೇಶ, ವಿಚಾರ ವೈವಿಧ್ಯಕ್ಕೆ ತಕ್ಕಂತೆ ರಸಭಾವನೆಗಳ ಗಾರುಡಿ ಇರಬೇಕು. ವಿಷಯ ಸಂಗ್ರಹ, ವಿಷಯವಿಸ್ತಾರ, ಸರಳ ಶೈಲಿ, ಸಂಕ್ಷಿಪ್ತತೆ, ಸುಸಂಬದ್ಧತೆ, ವಿಷಯದ ತಾರ್ಕಿಕ ಜೋಡಣೆ ಮುಂತಾದ ಅಂಶಗಳು ಸತ್ವಪೂರ್ಣವಾಗಿದ್ದಾಗ ಉತ್ತಮ ಪ್ರಬಂಧ ಮೂಡಿಬರುತ್ತದೆ.

## ಭಾಷಾ ಚಟುವಟಿಕೆ

**೧. ಕೊಟ್ಟಿರುವ ಪದಗಳಲ್ಲಿ ವಿಜಾತೀಯ ಸಂಯುಕ್ತಾಕ್ಷರಗಳನ್ನು ಆರಿಸಿ ಬರೆಯಿರಿ.**

ಸೂರ್ಯ, ತಮ್ಮ, ಶ್ರಮಣಿ, ಲಕ್ಷ್ಮಣ, ಪುತ್ರ, ಎನ್ನ, ಪ್ರವೇಶ, ಹಣ್ಣು, ಹೊಗಳ್ವೆ, ಸದ್ಗುಣ, ಅಹಂಕೃತಿ, ಮೆಚ್ಚು, ಕೈಯೊಳು, ಅಗ್ನಿ, ಮೃದು.

**೨. ನೀಡಿರುವ ಪದಗಳಲ್ಲಿ ಅವರ್ಗೀಯ ವ್ಯಂಜನಾಕ್ಷರಗಳನ್ನು ಆರಿಸಿ ಬರೆಯಿರಿ.**

ಕೂಟವ, ಮನ್ನಣೆಯ, ಮರುಕೊಳಿಸು, ಕೆಡದಲಾ, ಶಬರಿ, ಅಹುದು, ಬಂಬಲ, ಹೊಳೆ, ಹಾಯಾಗಿ.

## ಹೆಚ್ಚಿನ ಓದು

ಶಿವರಾಮ ಕಾರಂತರ **"ಕಿಸಾಗೋತಮಿ"** ಮತ್ತು ಪು.ತಿ.ನ. ಅವರ **"ಅಹಲ್ಯೆ'** ಗೀತ ನಾಟಕಗಳನ್ನು ಓದಿ.

ವಿ.ಸೀ. ಅವರ 'ಶಬರಿ' ಪದ್ಯವನ್ನು ಸಂಗ್ರಹಿಸಿ ಕಂಠಪಾಠಮಾಡಿ.



* * * * *

# ಅಮೆರಿಕದಲ್ಲಿ ಗೊರೂರು

**– ಗೊರೂರು ರಾಮಸ್ವಾಮಿ ಅಯ್ಯಂಗಾರ್**

**ಮುನ್ನುಡಿ :** ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಪ್ರವಾಸಕಥನವೂ ಒಂದು. "ದೇಶ ನೋಡು ಕೋಶ ಓದು" ಎಂಬ ಮಾತಿದೆ. ಪ್ರವಾಸದ ಸಮಯದಲ್ಲಿ ಕೇಳಿದ, ನೋಡಿದ, ಅನುಭವಿಸಿದ ಅಂಶಗಳನ್ನು ಸುಂದರವಾಗಿ ದಾಖಲಿಸುವುದೊಂದು ಕಲೆ. ಈ ಕಥನಕಲೆಯಲ್ಲಿ ಸಿದ್ಧಹಸ್ತರಾದ ಗೊರೂರು ರಾಮಸ್ವಾಮಿ ಅಯ್ಯಂಗಾರರು ಪ್ರಮುಖ ಪ್ರಬಂಧಕಾರರಾಗಿರುವಂತೆ ಉತ್ತಮ ಪ್ರವಾಸಕಥನವನ್ನು ರಚಿಸಿದ್ದಾರೆ. ಸಾಂಸ್ಕೃತಿಕವಾಗಿ ಶ್ರೀಮಂತನಾಗಿರುವ ವ್ಯಕ್ತಿ ಎಲ್ಲಿದ್ದರೂ ಸಾಂಸ್ಕೃತಿಕ ರಾಯಭಾರಿಯಂತೆ ನಡೆದುಕೊಳ್ಳುತ್ತಾನೆ. ವೈಜ್ಞಾನಿಕವಾಗಿ ಅಮೆರಿಕದವರಷ್ಟು ನಾವಿನ್ನೂ ಮುಂದುವರಿಯಲಿಲ್ಲ ಎಂದು ಹೇಳುತ್ತಲೆ ನಮ್ಮ ದೇಶದ ಸಾಂಸ್ಕೃತಿಕ ಮಹತ್ವವನ್ನು, ಸಾಹಿತ್ಯದ ಸೊಗಸನ್ನು ಮತ್ತು ನಾಡಿನ ಹಿರಿಮೆಯನ್ನು ಬಿಂಬಿಸುತ್ತಾರೆ. ರಾಷ್ಟ್ರಪಿತ ಗಾಂಧೀಜಿಯವರ ಅನುಯಾಯಿಯಾಗಿದ್ದ ಗೊರೂರರು ಖಾದಿಯ ಮಹತ್ವ ಮತ್ತು ಕನ್ನಡ ಸಾಹಿತ್ಯದ ಹಿರಿಮೆಯನ್ನು ಹಾಸ್ಯಲೇಪನದೊಂದಿಗೆ ಸುಂದರವಾಗಿ ನಿರೂಪಿಸಿದ್ದಾರೆ.



**ಅರ್ಥೈಸಿ ಓದಿ :**

**ಔದ್ಯೋಗೀಕರಣ, ದುರ್ಯೋಧನ, ವಿದ್ಯುಚ್ಛಕ್ತಿ, ಅವಾಂತರ, ದಿಗ್ಭ್ರಮೆ, ಆವರಣ ಲಕ್ಷ್ಯ, ತೋರಣ, ಜರ್ಬಾಗಿ, ರಾಟೆ, ರಂಜಿಸು**

ಯಾಂತ್ರೀಕರಣ, ವಿದ್ಯುದೀಕರಣ, ಔದ್ಯೋಗೀಕರಣ, ಅಣುಶಕ್ತಿ ಇವುಗಳ ವಿಷಯವನ್ನು ಪೂರ್ಣವಾಗಿ ತಿಳಿದು ಸ್ವಾಧೀನದಲ್ಲಿಟ್ಟುಕೊಂಡರೆ ಮಾತ್ರ ಇವುಗಳಿಂದ ಉಪಯೋಗ. ಇಲ್ಲವಾದರೆ ಇವು ನಮ್ಮನ್ನು ನಾಶ ಮಾಡುವುವು. ಪಾಶ್ಚಾತ್ಯರಲ್ಲಿ ಈ ಜ್ಞಾನವನ್ನು ತಕ್ಕಮಟ್ಟಿಗೆ ಮಕ್ಕಳಾದಿಯಾಗಿ ಎಲ್ಲರೂ ತಿಳಿದಿರುತ್ತಾರೆ. ಇವುಗಳ ಉಪಯೋಗವನ್ನು ನಾವು ಮಾಡಿಕೊಳ್ಳುವುದಾದರೆ ನಮಗೂ ಅಲ್ಪಸ್ವಲ್ಪ ತಿಳಿದಿರಬೇಕು.

ಒಂದು ದಿನ ನನ್ನ ಮಗಳು ಮತ್ತು ಅಳಿಯ ಇಬ್ಬರೂ ಕೆಲಸಕ್ಕೆ ಹೋಗಿದ್ದರು. ಹೋಗುವ ಮೊದಲು ವಿದ್ಯುತ್ ಒಲೆಯನ್ನು ಹೊತ್ತಿಸಿ ಅಡುಗೆ ಮಾಡಿ 'ಆಫ್' ಮಾಡಿ ಹೋದರು. ಮನೆಯವರು ಎಲ್ಲಿಗಾದರೂ ಹೊರಟರೆ, ನಾನು ಎಲ್ಲ ಸ್ವಿಚ್‌ಗಳನ್ನೂ 'ಆಫ್' ಮಾಡಿ ಹೋಗಿ ಎಂದೇ ಹೇಳುತ್ತಿದ್ದೆ. ನನ್ನ ಅಳಿಯ, ಮಗಳು, ಮಗು ಮನೆಬಿಟ್ಟು ಹೋದ ಮೇಲೆ, ನಾನು ನನ್ನ ಹೆಂಡತಿ ಇಬ್ಬರೇ ಮಾತನಾಡುತ್ತ ಕುಳಿತಿದ್ದೆವು. ಇದ್ದಕ್ಕಿದ್ದಂತೆ ಮನೆಯ ಯಾವುದೋ ಮೂಲೆಯಲ್ಲಿ 'ಕೊಯ್' ಶಬ್ದ ಪ್ರಾರಂಭವಾಯಿತು. ಅದು ಒಂದು ದೊಡ್ಡ ಧ್ವನಿಯ ಶ್ರುತಿಯಂತೆ ಒಂದೇ ಸಮನೆ ಕೂಗತೊಡಗಿತು. ನಾವು ಗಾಬರಿಯಾಗಿ ತಕ್ಷಣ ಮನೆಯನ್ನೆಲ್ಲ ಸುತ್ತಿ ನೋಡಿದೆವು. ಅಮೆರಿಕ, ಕೆನಡಗಳಲ್ಲಿ ಮನೆಗಳನ್ನು ಸಾಧಾರಣವಾಗಿ ಮರದಿಂದಲೇ ಕಟ್ಟಿರುತ್ತಾರೆ. ದುರ್ಯೋಧನನು ಅರಗಿನ ಮನೆ ಕಟ್ಟಿದಂತೆ. ಆದ್ದರಿಂದ ಅಮೆರಿಕ, ಕೆನಡಗಳಲ್ಲಿ ಬೆಂಕಿಯ ಭಯ ಅಪಾಯ ಹೆಚ್ಚು.

ಆ ಕೊಂಬಿನ ಸದ್ದು ಒಂದೇ ಸಮನಾಗಿ ನಡೆದೇ ಇತ್ತು. ಅಲ್ಲದೆ ಅಡುಗೆ ಮನೆಯ ವಿದ್ಯುತ್ ಒಲೆಯ ಕಡೆಯಿಂದಲೇ ಬರುತ್ತಿತ್ತು. ಎಲ್ಲ ಸ್ವಿಚ್‌ಗಳೂ 'ಆಫ್' ಆಗಿವೆಯೆಂದೇ ಹೆಂಡತಿ ಹೇಳಿದಳು. ವಿದ್ಯುತ್ ಒಲೆ

ಬಗ್ಗೆ ಅವಳಿಗೆ ಸ್ವಲ್ಪ ಅನುಭವವಿತ್ತು. ನಮ್ಮಲ್ಲಿ ಒಂದೋ ಎರಡೋ ಒಲೆ ಹಾಕಿಕೊಂಡು ಸ್ವಿಚ್ ಇಟ್ಟುಕೊಂಡಿರುತ್ತೇವೆ. ಆದರೆ ಅಲ್ಲಿ ಆ ಒಲೆಗಳ ಸ್ವಿಚ್ ಜೋಡಣೆ ಹೊಸ ತರಹ. ಅವುಗಳ ಮೇಲಿನ ಅಸಂಖ್ಯಾತ ಅಂಕಿ, ಗೆರೆ ಮತ್ತು ಬಣ್ಣಗಳು ಯಾವುದನ್ನು ಮುಟ್ಟಿದರೆ ಏನೋ ಎಂಬ ಭಯ. ಹೆಂಡತಿ "ಮಗ್ಗಲು ಮನೆಗಾದರೂ ಹೋಗಿ ಯಾರನ್ನಾದರೂ ಕರೆದುಕೊಂಡು ಬಂದು ತೋರಿಸಿ, ಮನೆಯಲ್ಲಿ ಬೆಂಕಿ ಹೊತ್ತಿಕೊಂಡೀತು" ಎಂದಳು.

ನಾನು ಬಲಗಡೆಯ ಮೊದಲನೆಯ ಮನೆಗೆ ಹೋಗಿ ನೋಡಿದೆ. ಬೀಗ ಹಾಕಿತ್ತು. ಎಡಗಡೆಯ ಎರಡು ಮನೆಗಳಿಗೆ ಹೋದೆ, ಯಾರೂ ಇರಲಿಲ್ಲ. ಬೀದಿಯಲ್ಲಿ ಯಾರಾದರೂ ಇದ್ದಾರೆಯೇ ಎಂದು ನೋಡಿದೆ. ಅಮೆರಿಕದ ಬೀದಿಯಲ್ಲಿ ನಡೆದುಕೊಂಡು ಹೋಗುವವರೇ ವಿರಳ. ಕಾರಿನಲ್ಲಿ ೬೫ ರಿಂದ ೭೦ ಮೈಲಿ ವೇಗದಲ್ಲಿ ಗರಹೊಡೆದವರಂತೆ ನುಗ್ಗುತ್ತಿರುತ್ತಾರೆ. ಇಷ್ಟೆಲ್ಲ ಗದ್ದಲ ಮಾಡುತ್ತಿದ್ದರೂ ಮನೆಯೊಳಗಿನ ವಿದ್ಯುತ್ ಕೊಂಬು ಲಕ್ಷ್ಯವಿಲ್ಲದೆ ಒಂದೇ ಸಮನಾಗಿ ಕೂಗುತ್ತಲೇ ಇತ್ತು.

ನಮ್ಮ ಮನೆಯಿಂದ ಸ್ವಲ್ಪ ದೂರದಲ್ಲಿ ಪ್ರೈಮರಿ ಶಾಲೆ ಇದ್ದಿತು. ಅದಾಗ ಪಾಠಶಾಲೆಯ ಹುಡುಗರನ್ನು ವಿರಾಮಕ್ಕಾಗಿ ಬಿಟ್ಟುದನ್ನು ನೋಡಿ, ನನ್ನ ಹೆಂಡತಿ "ಆ ಸ್ಕೂಲಿಗೆ ಹೋಗಿ ಯಾರಾದರೂ ಹುಡುಗರನ್ನೋ, ಮೇಷ್ಟ್ರನ್ನೋ ಕರೆದುಕೊಂಡು ಬನ್ನಿ. ಮನೆಸುಟ್ಟು ಹೋಗುವುದರೊಳಗಾಗಿ ಬನ್ನಿ!"ಎಂದು ಹೇಳಿದಳು. ಅವಳಿಗೂ ನನ್ನ ಮೇಲೆ ಕೋಪ. ಹೆಂಗಸರೂ ಮಕ್ಕಳೂ ವಿದ್ಯುಚ್ಛಕ್ತಿ, ಯಂತ್ರದವಿಣಿ ಇವನ್ನೆಲ್ಲ ನಡೆಸುವುದನ್ನು ಕಲಿತಿರುವಾಗ, ನಾನು ಯಾಕೆ ಅದನ್ನು ಸ್ವಲ್ಪವೂ ಕಲಿಯಲಿಲ್ಲ ಎಂದು ಅವಳು ನನ್ನನ್ನೇ ಕೋಪದಿಂದ ನೋಡುತ್ತ "ನನಗೆ ಇಂಗ್ಲಿಷ್ ಬಂದಿದ್ದರೆ, ನಾನು ಇಷ್ಟು ಹೊತ್ತಿಗೆ ಬೆಂಕಿ ಆರಿಸುವವರನ್ನೇ ಕರೆಸಿಬಿಡುತ್ತಿದ್ದೆ." ಎನ್ನುತ್ತಿರುವಂತೆ ನಾನು ಸ್ಕೂಲಿನತ್ತ ಹೆಜ್ಜೆ ಹಾಕಿದೆ. ಹಾಗೆ ಹೋಗುವಾಗ ಯಾವನಾದರೂ ದೊಡ್ಡ ಹುಡುಗ ಸಿಕ್ಕರೆ ಅವನನ್ನೇ ಮನೆಗೆ ಕರೆದುಕೊಂಡು ಹೋಗೋಣ ಎಂದು ಶಾಲಾ ಆವರಣವನ್ನು ಪ್ರವೇಶಿಸಿ, ಎಲ್ಲರನ್ನೂ ನೋಡುತ್ತಿದ್ದೆ. ನನ್ನನ್ನು ನೋಡಿದ ಕೂಡಲೇ ಅವರೆಲ್ಲ ಅಲ್ಲಿಂದ ಎದ್ದು ನಿಧಾನವಾಗಿ ನನ್ನನ್ನೇ ದುರುದುರನೆ ನೋಡುತ್ತ ಸ್ಕೂಲಿನ ಕಡೆಗೆ ಹೊರಟೇ ಹೋದರು.

ನನ್ನ ದೃಷ್ಟಿ ದೂರದಲ್ಲಿ ಕುಳಿತಿದ್ದ ಒಬ್ಬ ದೊಡ್ಡ ಬಾಲಕನ ಕಡೆ ಇದ್ದುದರಿಂದ, ನಾನು ಅವನ ಕಡೆಗೇ ಹೋಗುತ್ತಿರಲು, ಅವನೂ ನನ್ನನ್ನು ನೋಡಿ ಓಡಿಯೇ ಬಿಟ್ಟ. ನನಗೆ ಒಂದೂ ಅರ್ಥವಾಗಲಿಲ್ಲ. ಸ್ಕೂಲಿನ ಒಳ ಅಂಗಳದಲ್ಲಿ ಅವರೆಲ್ಲ ಗುಜುಗುಜು ಎನ್ನುತ್ತಾ ಸೇರಿದ್ದರು. ನಾನು ಅವರನ್ನು ಇನ್ನೂ ಸಮೀಪಿಸಲು ಯತ್ನಿಸಿದಾಗ ಅವರೆಲ್ಲ ಒಟ್ಟಾಗಿ ಸ್ಕೂಲಿನ ಒಳಗಡೆ ಇದ್ದ ಒಂದು ಪ್ರತ್ಯೇಕ ಬ್ಯಾಡ್‌ಮಿಂಟನ್‌ಟೆನ್ನಿಸ್ ಕೋರ್ಟ್ ಹಾಲ್‌ಗೆ ನುಗ್ಗಿದರು.

ಆ ಟೆನ್ನಿಸ್ ಹಾಲ್‌ನ ಇನ್ನೊಂದು ಕೊನೆಯೇ ಉಪಾಧ್ಯಾಯರ ವಿಶ್ರಾಂತಿ ಕೊಠಡಿ. ವಿಶ್ರಾಂತಿ ಕಾಲವಾದುದರಿಂದ ಉಪಾಧ್ಯಾಯರೆಲ್ಲ ಅಲ್ಲಿ ಸೇರಿದ್ದರು. ವಿದ್ಯಾರ್ಥಿಗಳೆಲ್ಲ ಉಪಾಧ್ಯಾಯರ ರಕ್ಷಣೆ ಕೋರಿ ಓಡಿದ್ದರೆಂಬುದು, ನಾನು ಟೆನ್ನಿಸ್ ಕೋರ್ಟ್ ಹಾಲನ್ನು ಪ್ರವೇಶಿಸಿದಾಗ ತಿಳಿಯಿತು. ಹಾಲಿನ ಮತ್ತೊಂದು ಕಡೆ ಹುಡುಗರನ್ನೂ ಮೀರಿ ನಿಂತಿದ್ದ ನನ್ನನ್ನು ಕಂಡು ಉಪಾಧ್ಯಾಯರೆಲ್ಲ ಕುತೂಹಲದಿಂದ ನನ್ನನ್ನೇ ದೃಷ್ಟಿಸಿದರು. ನಾನೇ ಅವರ ಹತ್ತಿರಕ್ಕೆ ಹೊರಟೆ. ಆಗ ಹುಡುಗರೆಲ್ಲ ತಮ್ಮ ನಡುವೆ ಯಾವುದಾದರೊಂದು ವಿಚಿತ್ರ ಪ್ರಾಣಿ ಹೋಗುತ್ತಿದ್ದರೆ ಹೇಗೋ ಹಾಗೆ ನನಗೆ ದಾರಿಬಿಟ್ಟು ಹಿಂದಕ್ಕೆ ನಿಂತುಕೊಂಡರು. ಉಪಾಧ್ಯಾಯರ

ಕಣ್ಣುಗಳೂ ಸಹ ನನ್ನಲ್ಲಿಯೇ ಪೂರ್ಣವಾಗಿ ನೆಟ್ಟಿದ್ದವು. ಅಷ್ಟು ಜನರ ಕಣ್ಣಿನ ತೋರಣದ ನಡುವೆ ನಡೆಯುತ್ತಿದ್ದ ನನಗೆ, ನಾನೊಬ್ಬ ಅಪರಾಧಿಯೋ, ಪ್ರಮುಖನೋ, ವಿಚಿತ್ರಪ್ರಾಣಿಯೋ ಎಂಬಂತೆ ಭಾಸವಾಯಿತು. ಇದ್ದಕ್ಕಿದ್ದಂತೆ ನನ್ನ ವೇಷ ವಿಚಿತ್ರವಾಗಿದೆ ಎಂಬ ಅಂಶ ನನಗೆ ಹೊಳೆಯಿತು.

ಆ ದಿನ ನಾನು ಅಗಲವಾದ ಎಂಟೂವರೆ ಮೊಳ ಉದ್ದದ ಖಾದಿ ಕಚ್ಚೆಪಂಚೆಯನ್ನು ಉಟ್ಟಿದ್ದೆ. ಅದು ಖಾದಿಯಲ್ಲಿ ಸಹ ದಪ್ಪನೂಲಿನ ಬಟ್ಟೆಯೆ. ಅದಕ್ಕೆ ಅಗಲವಾದ ಕೆಂಪು ಕಂಬಿ, ಕಂಬಿಯ ತುದಿಯಲ್ಲಿ ನಾಲ್ಕು ಜರಿಗೆರೆಗಳು. ಭಾರತದಲ್ಲಿರುವಾಗ ಅತಿ ಜರ್ಬಾಗಿ ಕಾಣುತ್ತೆ ಎಂದು ಅದನ್ನು ಹೆಚ್ಚಾಗಿ ಉಡುತ್ತಲೇ ಇರಲಿಲ್ಲ. ಹೊರದೇಶಕ್ಕೆ ಹೊರಟಾಗ ಧಡೂತಿಯಾಗಿದೆ, ಬೆಚ್ಚಗಿರುತ್ತೆ ಎಂದು ತೆಗೆದುಕೊಂಡಿದ್ದೆ. ಚಳಿಗಾಗಿ ಒಂದು ಕೆಂಪು ಉಣ್ಣೆಯ ಶಾಲು, ಮಫ್ಲರ್ ಕಟ್ಟಿದ್ದೆ. ಸ್ಕೂಲಿಗೆ ಹೋಗುವ ದಾರಿಯಲ್ಲಿ ಅದು ಸಡಿಲವಾದುದರಿಂದ ಹೆಗಲಮೇಲೆ ಹಾಕಿಕೊಂಡಿದ್ದೆ. ಕಾವಿಬಣ್ಣದ ನೀಳವಾದ ಜುಬ್ಬ, ಹಣೆಯಲ್ಲಿ ಢಾಳಾದ ಕೆಂಪು ನಾಮ, ತಲೆ ಮೇಲೆ ಕೆದರಿನಿಂತಿದ್ದ ಬಿಳಿಕೂದಲು, ಬಿಳಿ ಗಡ್ಡ, ಮೀಸೆ, ಕಾಲಿಗೆ ದಪ್ಪನಾದ ಎಕ್ಕಡ – ನನ್ನ ಮೈ ಉಡುಪುಗಳಲ್ಲಿ ಏಳೆಂಟು ಬಣ್ಣಗಳು, ಹೊಳಪು ಎಲ್ಲ ನೋಡಿ ಉಪಾಧ್ಯಾಯರು ನಕ್ಕರು. ತಕ್ಷಣ ಹುಡುಗರೆಲ್ಲ ಒಂದೇ ಉಸಿರಿಗೆ ದೀರ್ಘವಾಗಿ ನಕ್ಕರು. ಪೈಡ್ ಪೈಪರ್, ಸಾಂತಾಕ್ಲಾಸ್ ಎಂದೆಲ್ಲ ಕೂಗಿದರು. ಉಪಾಧ್ಯಾಯರೊಬ್ಬರು ನಿಮ್ಮ ಉಡುಪು ಸ್ವಲ್ಪ ವಿಚಿತ್ರವಾಗಿದೆ. “It is your dress-some what unusual” ದಯವಿಟ್ಟು ಕುಳಿತುಕೊಳ್ಳಿ. ನಿಮಗೆ ಏನಾಗಬೇಕು ? ಎಂದು ಕುರ್ಚಿ ತೋರಿಸಿದರು. ಅಷ್ಟರಲ್ಲಿಯೇ ಮತ್ತೊಬ್ಬ ಉಪಾಧ್ಯಾಯಿನಿ “ನಿಮಗೆ ಚಳಿಯಾಗುವುದಿಲ್ಲವೇ? ನೀವು ಎಲ್ಲಿಂದ ಬಂದಿರುವಿರಿ?” ಎಂದು ಕೇಳಿದರು. ಈ ಅವಾಂತರದಲ್ಲಿ ನಾನು ಸ್ಕೂಲಿಗೆ ಬಂದ ಉದ್ದೇಶವನ್ನೇ ಮರೆತುಬಿಟ್ಟೆ. ನಾನು “ನೀವು ಗಾಂಧೀ ಹೆಸರು ಕೇಳಿರುವಿರಾ?” ಎಂದೆ. ನಾಲ್ಕಾರು ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರೂ “ಕೇಳಿದ್ದೇವೆ” ಎಂದರು. ಒಬ್ಬ ವಿದ್ಯಾರ್ಥಿ “ನಮ್ಮ ಪುಸ್ತಕದಲ್ಲಿ ಗಾಂಧೀ ಮೇಲೆ ಒಂದು ಪಾಠವಿದೆಯಲ್ಲ” ಎಂದನು. “ನಾನು ಗಾಂಧೀ ಭಾರತದಲ್ಲಿ ಜನಿಸಿದವನು. ಭಾರತದ ಹವೆ ಬಹಳ ಹಿತವಾಗಿರುತ್ತದೆ. ಅಲ್ಲಿ ಅತ್ಯಂತ ಕಡಿಮೆ ಬಟ್ಟೆಗಳಿಂದಲೇ ಜೀವಿಸಬಹುದು. ಈ ಬಟ್ಟೆಯನ್ನು ಭಾರತದಲ್ಲಿ ಪ್ರಚಾರಕ್ಕೆ ತಂದವರು ಗಾಂಧೀಜಿ. ಇದು ಪೂರ್ಣವಾಗಿ ಕೈಯಿಂದಲೇ ತಯಾರಾದ ಬಟ್ಟೆ. ಇದಕ್ಕೆ ಯಾವ ರೀತಿಯಿಂದಲೂ ಯಂತ್ರದ ಸೋಂಕು ಉಂಟಾಗಿಲ್ಲ” ಎಂದೆ. ನಾನು ಕೈಯಿಂದ ಮಾಡಿದ್ದು ಎಂದ ಕೂಡಲೇ ಎಲ್ಲ ಉಪಾಧ್ಯಾಯರೂ ಹುಡುಗರೂ ಬಂದು ನನ್ನ ಬಟ್ಟೆಗಳನ್ನು ಮುಟ್ಟಿ ನೋಡಿದರು. ಒಬ್ಬ ಉಪಾಧ್ಯಾಯರು “ಕೈಯಿಂದ ಇದನ್ನು ಮಾಡುವುದು ಹೇಗೋ” ಎಂದು ನನ್ನ ಮಾತಿನಲ್ಲಿ ಅಪನಂಬಿಕೆಯನ್ನೇ ವ್ಯಕ್ತಪಡಿಸಿದರು. ನಾನು ರಾಟೆ(ಚರಕ)ಯಿಂದ ನೂಲುವುದು, ಮಗ್ಗದಿಂದ ನೇಯುವುದು ಈ ವಿಷಯಗಳನ್ನೆಲ್ಲ ವಿವರಿಸುತ್ತಾ ಹಾಗೇ ಬಾಗಿಲ ಕಡೆ ದೃಷ್ಟಿ ಹಾಯಿಸಿದಾಗ ನನ್ನ ಹೆಂಡತಿ ಬಾಗಿಲಿನಿಂದ ಒಳಕ್ಕೆ ಬರುತ್ತಿದ್ದಳು. ಅವಳನ್ನು ನೋಡಿ ಕೂಡ ಉಪಾಧ್ಯಾಯರಿಗೂ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೂ ನನ್ನನ್ನು ನೋಡಿದಷ್ಟೇ ದಿಗ್ಭ್ರಮೆಯಾಯಿತು.

ನನ್ನ ಹೆಂಡತಿ ನೆಟ್ಟಗೆ ಬಂದು ನನ್ನ ಮುಂದೆ ನಿಂತುಕೊಂಡು “ಚೆನ್ನಾಯ್ತು, ಬಂದ ಕೆಲಸವೇ ಬಿಟ್ಟು ಮಾತಾಡ್ತಾ ಕೂತುಬಿಟ್ಟಿರಿ. ಈಗಲೋ ಆಗಲೋ ಮನೆ ಉರಿದು ಹೋಗುತ್ತೆ” ಎಂದಳು. ನನಗೆ ಆಗ ನಾನು ಬಂದಿದ್ದ ಕಾರ್ಯದ ಜ್ಞಾನೋದಯವಾಯಿತು. ನಾನು ಉಪಾಧ್ಯಾಯರಿಗೆ “ಈಕೆ ನನ್ನ ಹೆಂಡತಿ. ನಮ್ಮ ಮನೆ ನೋಡಿ ಆ ಎದುರು ಸಾಲಿನಲ್ಲಿದೆ. ಅಲ್ಲಿ ವಿದ್ಯುತ್ ಒಲೆ ಏನೋ ತೊಂದರೆ ಕೊಡುತ್ತಿದೆ. ನನಗೆ ಅಭ್ಯಾಸವಿಲ್ಲ. ನಿಮ್ಮ ವಿದ್ಯಾರ್ಥಿಗಳ ಪೈಕಿ ಈ ವಿಷಯ ಗೊತ್ತಿರುವವರು ಯಾರಾದರೂ ಬಂದು ಒಂದು ಗಳಿಗೆ ನೋಡಿ ಸರಿಪಡಿಸುವರೇ?”ಎಂದು ಕೇಳಿದೆ. ಉಪಾಧ್ಯಾಯರು ಹುಡುಗರ ಪೈಕಿ ಬಲಿಷ್ಠನಾದವನನ್ನು

ಕರೆದು "ಸ್ವಲ್ಪ ಹೋಗಿ ಇವರಿಗೆ ಸಹಾಯ ಮಾಡಿ ಬಾ"ಎಂದರು. ಆ ಹುಡುಗ ನನ್ನ ಜೊತೆ ಹೊರಟು ಮನೆಗೆ ಬಂದ. ನೆಟ್ಟನೆ ಅಡುಗೆ ಮನೆಗೆ ಬಂದು ಸುತ್ತ ನೋಡಿದ. ವಿದ್ಯುತ್ ಒಲೆಗೆ ಸಂಬಂಧಿಸಿದ ಒಂದು ಮುಳ್ಳಿಗೆ ಆ ಧ್ವನಿ ಸಂಬಂಧಿಸಿದ್ದೆಂದು ಅವನಿಗೆ ತಿಳಿಯಿತು. ಅದರ ಸ್ವಿಚ್ಚನ್ನು ಪತ್ತೆ ಮಾಡಿ ಅವನು ಅದನ್ನು ಅಮುಕಿದ, ಕೂಡಲೇ ಧ್ವನಿ ನಿಂತಿತು. ಆ ಸ್ವಿಚ್ಚನ್ನು ನನ್ನ ಮಗಳು ಆಫ್ ಮಾಡದೇ ಹೋಗಿದ್ದುದರಿಂದ ಅದು ಶಂಖವಾದ್ಯ ಪೂರೈಸುತ್ತಿದ್ದಿತೆಂಬುದು ನಮಗೆ ಅನಂತರ ಗೊತ್ತಾಯಿತು.

ಇದಾದ ಅನಂತರ ನಾನು ಇನ್ನೂ ಮೂರು ನಾಲ್ಕುದಿನ ಅದೇ ಸ್ಕೂಲಿಗೆ ಹೋಗಿ, ವಿದ್ಯಾರ್ಥಿಗಳಿಗೆ ಪ್ರಶ್ನೋತ್ತರದ ಸಂಭಾಷಣೆ ನಡೆಸಿದೆ. ಅಮೆರಿಕದವರ ಜೀವನ ಕ್ರಮವನ್ನು ಹತ್ತಿರದಿಂದ ನೋಡುವುದೂ ನನ್ನ ಗುರಿಯಾಗಿದ್ದುದರಿಂದ ನಾನು ಹೇಳುತ್ತಿದ್ದ ಕನ್ನಡನಾಡಿನ ಅನೇಕ ಜಾನಪದ ಹಾಸ್ಯ ಕಥೆಗಳು, ಗಾದೆಗಳು ಮತ್ತು ಪಂಚತಂತ್ರದ ಕಥೆಗಳೆಲ್ಲ ವಿದ್ಯಾರ್ಥಿಗಳನ್ನೂ, ಉಪಾಧ್ಯಾಯರನ್ನೂ ಸಮಾನವಾಗಿಯೇ ರಂಜಿಸಿದವು. ಆ ದೇಶ ಬಿಟ್ಟು ಹೊರಟಾಗ ಅವರಿಂದ ಅತ್ಯಂತ ಆತ್ಮೀಯವಾದ ಬೀಳ್ಕೊಡುಗೆಯನ್ನು ಹೊಂದಿದೆ.

## ಕರ್ತೃ–ಭಾವ–ಆಕರ



**ಗೊರೂರು ರಾಮಸ್ವಾಮಿ ಅಯ್ಯಂಗಾರ್** (ಕ್ರಿ.ಶ. ೧೯೦೪) ಇವರು ಹಾಸನ ಜಿಲ್ಲೆಯ ಗೊರೂರಿನವರು. ಗಾಂಧೀಜಿಯವರ ನೇರ ಸಂಪರ್ಕ ಹೊಂದಿದ್ದ ಇವರು ಗುಜರಾತ್ ವಿದ್ಯಾಪೀಠದ ವಿದ್ಯಾರ್ಥಿಯಾಗಿದ್ದರು. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದಲ್ಲದೆ, ಗಾಂಧೀತತ್ವಪ್ರಸಾರದಲ್ಲಿ ತೊಡಗಿದ್ದರು. ಕನ್ನಡ ನವೋದಯ ಗದ್ಯಪ್ರಕಾರದ ಪ್ರಮುಖ ಲೇಖಕರಾದ ಇವರು ಸಣ್ಣಕತೆ, ಪ್ರಬಂಧ, ಪ್ರವಾಸಕಥನ ಕಾದಂಬರಿ. ಜೀವನಚರಿತೆ, ಅನುವಾದವೂ ಸೇರಿದಂತೆ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. **ಗರುಡಗಂಬದದಾಸಯ್ಯ, ಮೆರವಣಿಗೆ, ಹೇಮಾವತಿ ತೀರದಲ್ಲಿ, ಪುನರ್ಜನ್ಮ, ನಮ್ಮ ಊರಿನ ರಸಿಕರು** ಇವರ ಪ್ರಮುಖ ಕೃತಿಗಳು. **ಅಮೆರಿಕದಲ್ಲಿ ಗೊರೂರು** ಕೃತಿ ಪ್ರವಾಸಕಥನವಾಗಿದ್ದು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಭಾಜನವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ **ಗೌರವ ಡಿ.ಲಿಟ್** ಪದವಿ ಪಡೆದಿರುವ ಗೊರೂರರು ೧೯೬೭ರಲ್ಲಿ ತರೀಕೆರೆಯಲ್ಲಿ ನಡೆದ ಜಾನಪದ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೯೮೧ರಲ್ಲಿ ಶಿರಸಿಯಲ್ಲಿ ಸಮಾವೇಶಗೊಂಡಿದ್ದ ಅಖಿಲ ಭಾರತದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

[ಆಧಾರ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಷಯ ವಿಶ್ವಕೋಶ]

ಪ್ರವಾಸವು ಅನುಭವವನ್ನು ಹೆಚ್ಚಿಸುತ್ತದೆ. ವೈವಿಧ್ಯಮಯ ಜೀವನದ ದರ್ಶನವಾಗುತ್ತದೆ. ಸಂಸ್ಕೃತಿಯ ಪರಿಚಯವಾಗುತ್ತದೆ. ಆಧುನಿಕ ಯುಗದಲ್ಲಿ ವಿಜ್ಞಾನ, ತಂತ್ರಜ್ಞಾನದ ಅರಿವಿನ ಮಹತ್ವವನ್ನು ತಿಳಿಸಿಕೊಡುತ್ತದೆ. ಅಮೆರಿಕದಂಥ ರಾಷ್ಟ್ರಗಳು ವೈಜ್ಞಾನಿಕವಾಗಿ ಮುಂದುವರಿದಿದ್ದು, ಅಲ್ಲಿನ ಮಕ್ಕಳಿಗೂ ಅದರ ಜ್ಞಾನವಿರುತ್ತದೆ. ಎಂಬುದನ್ನು ಸಾಕ್ಷೀಕರಿಸುತ್ತಲೇ ಗಾಂಧೀತತ್ತ್ವ, ಖಾದಿಮಹತ್ವ, ಭಾರತೀಯ ಸಾಹಿತ್ಯ, ಸಂಸ್ಕೃತಿಯನ್ನು ಅಮೆರಿಕದ ನ್ಯೂಯಾರ್ಕ್ ಶಾಲೆಯ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರಿಗೆ ತಿಳಿಸುವ ಗೊರೂರರ ಉದ್ದೇಶ ಪ್ರವಾಸ ಕಥನದಲ್ಲಿ ಅತ್ಯಂತ ಸೊಗಸಾಗಿ ಮೂಡಿದೆ.

**ಗೊರೂರು ರಾಮಸ್ವಾಮಿ ಅಯ್ಯಂಗಾರ್** ವಿರಚಿತ **ಅಮೆರಿಕದಲ್ಲಿ ಗೊರೂರು** ಎಂಬ ಕೃತಿಯಿಂದ ಈ ಗದ್ಯಭಾಗವನ್ನು ಆಯ್ಕೆಮಾಡಲಾಗಿದೆ.

## ಪದ–ಅರ್ಥ:

ಸಹವಾಸ–ಒಡನಾಟ; ಸ್ವಾಧೀನ–ವಶ ; ಮಗ್ಗಲು – ಬದಿ; ಗರ(ಧ್ಬ)–ಗ್ರಹ(ತ್ಸ); ದೃಷ್ಟಿ – ನೋಟ; ಅಪರಾಧಿ – ತಪ್ಪಿತಸ್ಥ ; ಭಾಸ – ಅನ್ನಿಸು ; ಜರ್ಬು – ಭರ್ಜರಿ ; ಧಡೂತಿ – ದಪ್ಪ; ಎಕ್ಕಡ – ಚಪ್ಪಲಿ; ಅವಾಂತರ – ಗೊಂದಲ ; ದಿಗ್ಭ್ರಮೆ – ಗಾಬರಿ; ನೆಟ್ಟಗೆ – ನೇರವಾಗಿ ; ಪೈಕಿ–ಸಂಬಂಧಿಕ; ಬಲಿಷ್ಠ – ಬಲಶಾಲಿ ; ಪತ್ತೆ – ಶೋಧ, ಯಂತ್ರದ ಏಣಿ – ಲಿಫ್ಟ್.

## ಪಠ್ಯಾಧಾರ ಟಿಪ್ಪಣಿ

**–ಯಾಂತ್ರೀಕರಣ :** ಯಂತ್ರಗಳ ಸಹಾಯದಿಂದ ಕೆಲಸವನ್ನು ನಿರ್ವಹಿಸುವುದು, ಕೈಗಾರಿಕೀಕರಣ.

**–ವಿದ್ಯುದೀಕರಣ :** ವಿದ್ಯುತ್ ಶಕ್ತಿಯಿಂದ ಕೆಲಸಗಳನ್ನು ನಿರ್ವಹಿಸುವುದು.

**–ಔದ್ಯೋಗೀಕರಣ :** ಸಂಘಟಿತವಾಗಿ ವಿವಿಧ ಬಗೆಯ ಉದ್ಯೋಗಗಳನ್ನು ಮಾಡುವಿಕೆ.

**–ಪೈಡ್ ಪೈಪರ್ :** ಅಮೇರಿಕದ ಜನಪದ ಕಥೆ ಆಧಾರಿತ ಹಾಸ್ಯಮಯ ನಾಟಕ, John Wolf gang Van Goethe ಎಂಬವನು ಈ ನಾಟಕದ ಕರ್ತೃ.

**–ಸಾಂತಾಕ್ಲಾಸ್ :** ಸೈಂಟ್ ನಿಕೋಲಸ್ ಎಂಬವರು ಜರ್ಮನಿಯ ಉತ್ತರ ಭಾಗದಲ್ಲಿ ಬಿಷಪರಾಗಿದ್ದರು. ಜನಪರ ಕಾಳಜಿ ಇದ್ದ ಇವರು ಮಕ್ಕಳನ್ನು ಅತಿ ಹೆಚ್ಚು ಪ್ರೀತಿಸುತ್ತಿದ್ದರು. ಕ್ರಿಸ್‌ಮಸ್ ಸಂದರ್ಭದಲ್ಲಿ ಏಸುಕ್ರಿಸ್ತನ ಸಂದೇಶವನ್ನು ಸಾರುವ ಅನೇಕ ಹಾಡುಗಳನ್ನು ಹಾಡುತ್ತಾ ಮಕ್ಕಳೊಂದಿಗೆ ಕುಣಿದಾಡುತ್ತಿದ್ದರು. ಇದೇ ಸಂದರ್ಭದಲ್ಲಿ ಮಕ್ಕಳಿಗೆ ಸಿಹಿತಿನಿಸು, ಚಾಕಲೇಟ್‌ಗಳನ್ನು ನೀಡುತ್ತಾ ಅವರನ್ನು ಸಂತಸದ ಸಾಗರದಲ್ಲಿ ತೇಲಾಡುವಂತೆ ಮಾಡುತ್ತಿದ್ದರು. ಈಗಲೂ ಅವರ ಸ್ಮರಣಾರ್ಥ ಪ್ರಪಂಚದ ಎಲ್ಲಾಕಡೆ ಮುದುಕನ ವೇಷಹಾಕಿಕೊಂಡು (ಸಾಂತಾಕ್ಲಾಸ್‌ನನ್ನು ಹೋಲುವಂತೆ) ಮಕ್ಕಳನ್ನು ಕುಣಿಸುವ ಪರಿಪಾಠವಿದೆ.



## ಅಭ್ಯಾಸ

**ಅ) ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧. ಪಾಶ್ಚಾತ್ಯರಲ್ಲಿ ಮಕ್ಕಳಾದಿಯಾಗಿ ಎಲ್ಲರೂ ತಿಳಿದು ಕೊಂಡಿರುವ ಅಂಶಗಳು ಯಾವುವು?
೨. ಅಮೆರಿಕ, ಕೆನಡಾ ದೇಶಗಳಲ್ಲಿ ಬೆಂಕಿಯ ಅಪಾಯ ಹೆಚ್ಚು ಏಕೆ?
೩. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಸ್ಕೂಲಿನತ್ತ ಹೆಜ್ಜೆ ಹಾಕಲು ಕಾರಣವೇನು?
೪. ಅಮೆರಿಕದ ವಿದ್ಯಾರ್ಥಿಗಳನ್ನು ರಂಜಿಸಿದ ಕನ್ನಡಸಾಹಿತ್ಯದ ಭಾಗಗಳು ಯಾವುವು?
೫. ಶಾಲೆಗೆ ಹೋದ ಕೆಲಸದ ಬಗ್ಗೆ ಗೊರೂರರಿಗೆ ಯಾವಾಗ ಜ್ಞಾನೋದಯವಾಯಿತು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ವಿದ್ಯಾರ್ಥಿಗಳು ಗೊರೂರರನ್ನು ಕಂಡು ಭಯಗೊಳ್ಳಲು ಕಾರಣವೇನು?
೨. ಶಾಲೆಗೆ ಹೋದ ಉದ್ದೇಶವನ್ನು ಗೊರೂರರು ಮರೆತದ್ದು ಏಕೆ?
೩. ಗೊರೂರು ರಾಮಸ್ವಾಮಿ ಅಯ್ಯಂಗಾರರಿದ್ದ ಮನೆಯಲ್ಲಿ ಬೆಂಕಿ ಹೊತ್ತಿಕೊಂಡೀತು ಎಂದು ಆತಂಕ ಪಟ್ಟದ್ದು ಏಕೆ?

ಇ. **ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು-ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಗೊರೂರು ರಾಮಸ್ವಾಮಿ ಅಯ್ಯಂಗಾರರ ವೇಷಭೂಷಣಗಳು ಹೇಗಿದ್ದವು ?

೨. ಖಾದಿ ಬಟ್ಟೆಯ ವೈಶಿಷ್ಟ್ಯವನ್ನು ಗೊರೂರರು ಅಮೆರಿಕದ ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳಿಗೆ ಹೇಗೆ ಪರಿಚಯಿಸಿದರು?

೩. ವಿದ್ಯುತ್ ಒಲೆಯಿಂದ ಉಂಟಾಗಬಹುದಾಗಿದ್ದ ಅಪಾಯವನ್ನು ಗೊರೂರರು ಹೇಗೆ ಪರಿಹರಿಸಿಕೊಂಡರು?

ಈ. **ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿ.**

೧. "ನನಗೆ ಇಂಗ್ಲಿಷ್ ಬಂದಿದ್ದರೆ ನಾನು ಇಷ್ಟು ಹೊತ್ತಿಗೆ ಬೆಂಕಿ ಆರಿಸುವವರನ್ನೇ ಕರೆಸಿ ಬಿಡುತ್ತಿದ್ದೆ".

೨. "ನಮ್ಮ ಪುಸ್ತಕದಲ್ಲಿ ಗಾಂಧಿ ಮೇಲೆ ಒಂದು ಪಾಠವಿದೆಯಲ್ಲ".

೩. "ಇದು ಪೂರ್ಣವಾಗಿ ಕೈಯಿಂದಲೇ ತಯಾರಾದ ಬಟ್ಟೆ.".

೪. "ಸ್ವಲ್ಪ ಹೋಗಿ ಇವರಿಗೆ ಸಹಾಯ ಮಾಡಿ ಬಾ".

೫. "ಕೈಯಿಂದ ಇದನ್ನು ಮಾಡುವುದು ಹೇಗೋ".

ಉ. **ಕೊಟ್ಟಿರುವ ನಾಲ್ಕು ಉತ್ತರಗಳಲ್ಲಿ ಸರಿಯಾದ ಉತ್ತರವನ್ನು ಆರಿಸಿ ಬರೆಯಿರಿ.**

೧. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಗೊರೂರರ ಕೃತಿ ________
(ಅಮೆರಿಕದಲ್ಲಿ ಗೊರೂರು, ಹೇಮಾವತಿ ತೀರದಲ್ಲಿ, ಪುನರ್ಜನ್ಮ, ಮೆರವಣಿಗೆ)

೨. ದುರ್ಯೋಧನನು ಪಾಂಡವರಿಗಾಗಿ ಕಟ್ಟಿದ ಮನೆ ______
(ಮಣ್ಣಿನಮನೆ, ಇಟ್ಟಿಗೆಮನೆ, ಅರಗಿನಮನೆ, ಕಲ್ಲಿನಮನೆ)

೩. ಗೊರೂರರನ್ನು ಕಂಡ ವಿದ್ಯಾರ್ಥಿಗಳು ಸ್ಕೂಲಿನ ಒಳಗಡೆ ಇದ್ದ ______ ಹಾಲ್‌ಗೆ ನುಗ್ಗಿದರು.
(ಡಿಸ್ಟ್ರಿಕ್ಟ್‌ಕೋರ್ಟ್, ಬ್ಯಾಡ್‌ಮಿಂಟನ್‌ಕೋರ್ಟ್, ಹೈಕೋರ್ಟ್, ಕಬಡಿಕೋರ್ಟ್)

೪. ಅಮೆರಿಕದವರ ________ ಕ್ರಮವನ್ನು ಹತ್ತಿರದಿಂದ ನೋಡುವುದು ಗೊರೂರರ ಉದ್ದೇಶವಾಗಿತ್ತು.
(ಜೀವನ, ಪಠ್ಯ, ಶಿಕ್ಷಣ, ಬೋಧನ)



## ಸೈದ್ಧಾಂತಿಕ ಭಾಷಾಭ್ಯಾಸ

**ಸಂಧಿಗಳು :**

ಸಂಧಿಗಳಲ್ಲಿ ಮೂಲಭೂತವಾಗಿ ಕನ್ನಡಸಂಧಿ ಮತ್ತು ಸಂಸ್ಕೃತಸಂಧಿ ಎಂದು ಎರಡು ವಿಭಾಗಗಳಿವೆ. ಲೋಪ, ಆಗಮ, ಆದೇಶ ಸಂಧಿಗಳನ್ನು ಕನ್ನಡ ಸಂಧಿಗಳೆಂದು ಕರೆಯಲಾಗಿದೆ. ಇವುಗಳಲ್ಲಿ ಲೋಪ ಮತ್ತು ಆಗಮ ಸಂಧಿಗಳು ಸ್ವರಸಂಧಿಗಳೆಂತಲೂ ಆದೇಶ ಸಂಧಿಯು ವ್ಯಂಜನ ಸಂಧಿಯೆಂತಲೂ ಕರೆಯಲ್ಪಡುತ್ತವೆ. ಸವರ್ಣದೀರ್ಘ, ಗುಣ, ವೃದ್ಧಿ, ಯಣ್, ಜಶ್ತ್ವ, ಶ್ಚುತ್ವ, ಅನುನಾಸಿಕ ಸಂಧಿಗಳನ್ನು ಸಂಸ್ಕೃತ ಸಂಧಿಗಳೆಂದು ಕರೆಯಲಾಗುವುದು. ಇವುಗಳಲ್ಲಿ ಸವರ್ಣದೀರ್ಘ, ಗುಣ, ವೃದ್ಧಿ ಮತ್ತು ಯಣ್ ಸಂಧಿಗಳು ಸ್ವರಸಂಧಿಗಳೆಂತಲೂ ಜಶ್ತ್ವ, ಶ್ಚುತ್ವ, ಅನುನಾಸಿಕ ಸಂಧಿಗಳು ವ್ಯಂಜನ ಸಂಧಿಗಳೆಂತಲೂ ಕರೆಯಲ್ಪಡುತ್ತವೆ.

ಉದಾ :

**ಲೋಪ** – ಊರೂರು, ಬಲ್ಲೆನೆಂದು, ಮಾತಂತು, ಸಂಪನ್ನರಾದ

**ಆಗಮ** – ಕೈಯನ್ನು, ಮಳೆಯಿಂದ, ಶಾಲೆಯಲ್ಲಿ, ಮರವನ್ನು, ಮಗುವಿಗೆ

**ಆದೇಶ** – ಮಳೆಗಾಲ, ಮೈದೋರು, ಬೆಂಬತ್ತು, ಕಡುವೆಳ್ಪು, ಮೆಲ್ವಾತು

**ಸವರ್ಣದೀರ್ಘ** – ಮಹಾತ್ಮ, ಗಿರೀಶ, ಸುರಾಸುರ, ವಧೂಪೇತ

**ಗುಣ** – ದೇವೇಂದ್ರ, ಜ್ಞಾನೇಶ್ವರ, ಸೂರ್ಯೋದಯ, ಮಹರ್ಷಿ, ಮಹೇಶ

**ವೃದ್ಧಿ** – ಏಕೈಕ, ಜನೈಕ್ಯ, ವನೌಷಧಿ, ಅಷ್ಟೈಶ್ವರ್ಯ

**ಯಣ್** – ಅತ್ಯವಸರ, ಜಾತ್ಯತೀತ, ಕೋಟ್ಯಧೀಶ್ವರ, ಕೋಟ್ಯನುಕೋಟಿ.

**ಜಶ್ತ್ವ** – ವಾಗ್ದೇವಿ, ಅಜಂತ, ಷಡಾನನ, ದಿಗಂತ, ಅಬ್ಧಿ

**ಶ್ಚುತ್ವ** – ಪಯಶ್ಶಯನ, ಶರಚ್ಚಂದ್ರ, ಜಗಜ್ಜ್ಯೋತಿ, ಬೃಹಚ್ಛತ್ರ

**ಅನುನಾಸಿಕ** – ಷಣ್ಮುಖ, ಸನ್ಮಾನ, ವಾಙ್ಮಯ, ಉನ್ಮಾದ, ತನ್ಮಯ

## ದ್ವಿರುಕ್ತಿ

**ಈ ವಾಕ್ಯಗಳನ್ನು ಗಮನಿಸಿ :**

–ಮಕ್ಕಳು ಓಡಿಓಡಿ ದಣಿದರು.

–ಈಗೀಗ ಅವಳು ಚೆನ್ನಾಗಿ ಓದುತ್ತಾಳೆ.

–ದೊಡ್ಡ ದೊಡ್ಡ ಮರಗಳು ಬಿದ್ದವು.

ಈ ವಾಕ್ಯಗಳಲ್ಲಿ **ಓಡಿ, ಈಗ, ದೊಡ್ಡ** ಎಂಬ ಪದಗಳು ಎರಡೆರಡು ಬಾರಿ ಪ್ರಯೋಗವಾದುದನ್ನು ಗಮನಿಸಬಹುದು ಹೀಗೆ–

**ಸೂತ್ರ :– ಒಂದು ವಿಶೇಷಾರ್ಥವನ್ನು ವ್ಯಕ್ತಪಡಿಸುವುದಕ್ಕಾಗಿ ಒಂದು ಪದವನ್ನೋ, ಒಂದು ವಾಕ್ಯವನ್ನೋ, ಎರಡೆರಡು ಬಾರಿ ಪ್ರಯೋಗ ಮಾಡುವುದಕ್ಕೆ ದ್ವಿರುಕ್ತಿ ಎನ್ನುತ್ತಾರೆ.**

ಇಂತಹ ಪದಗಳು ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತವೆ.

**ಉದಾ:**

**ಉತ್ಸಾಹದಲ್ಲಿ** – ಹೌದು ಹೌದು, ನಿಲ್ಲುನಿಲ್ಲು, ಬಂದೆಬಂದೆ

**ಆಧಿಕ್ಯದಲ್ಲಿ** – ದೊಡ್ಡದೊಡ್ಡ, ಹೆಚ್ಚುಹೆಚ್ಚು

**ಪ್ರತಿಯೊಂದು** – ಮನೆಮನೆಗಳಲ್ಲಿ, ಕೇರಿಕೇರಿಗಳನ್ನು

**ಸಂಭ್ರಮದಲ್ಲಿ** – ಅಗೋಅಗೋ, ಬನ್ನಿಬನ್ನಿ

**ಆಶ್ಚರ್ಯದಲ್ಲಿ** – ಅಬ್ಬಬ್ಬಾ, ಅಹಹಾ

**ಆಕ್ಷೇಪದಲ್ಲಿ** – ಬೇಡಬೇಡ, ನಡೆನಡೆ

**ನಿಷೇಧದಲ್ಲಿ** – ಸಾಕು ಸಾಕು

**ಒಪ್ಪಿಗೆಯಲ್ಲಿ** – ಹೌದ್ಹೌದು, ಆಗಲಿ ಆಗಲಿ, ಇರಲಿ ಇರಲಿ.

**ಅವಸರದಲ್ಲಿ** – ಓಡುಓಡು, ನಡೆನಡೆ

**ಇವುಗಳಲ್ಲದೆ ಇನ್ನೂ ಕೆಲವು ವಿಶೇಷ ರೂಪಗಳು ಇವೆ.**

ಮೊದಲುಮೊದಲು – ಮೊತ್ತಮೊದಲು / ಮೊಟ್ಟಮೊದಲು

ಕಡೆಗೆಕಡೆಗೆ – ಕಟ್ಟಕಡೆಗೆ / ಕಡೆಕಡೆಗೆ

ನಡುವೆನಡುವೆ – ನಟ್ಟನಡುವೆ / ನಡುನಡುವೆ

ಬಯಲುಬಯಲು – ಬಟ್ಟಬಯಲು

ತುದಿತುದಿ – ತುತ್ತತುದಿ

ಕೊನೆಗೆಕೊನೆಗೆ – ಕೊನೆಕೊನೆಗೆ

ಮೆಲ್ಲನೆಮೆಲ್ಲನೆ – ಮೆಲ್ಲಮೆಲ್ಲನೆ

**ಜೋಡುನುಡಿ :** ಮೇಲ್ನೋಟಕ್ಕೆ ದ್ವಿರುಕ್ತಿಗಳ ಹಾಗೆ ಕಂಡುಬರುವ ಕೆಲವು ಪದಗಳಿವೆ. ಆದರೆ ಅವುಗಳನ್ನು ದ್ವಿರುಕ್ತಿಗಳೆಂದು ಹೇಳುವ ವಾಡಿಕೆಯಿಲ್ಲ. ಅವುಗಳನ್ನು **ಜೋಡುನುಡಿ**ಗಳೆಂದು ಕರೆಯಲಾಗುತ್ತದೆ. ದ್ವಿರುಕ್ತಿಯಲ್ಲಿ ಒಂದೇಪದ ಎರಡು ಬಾರಿ ಬಂದರೆ, ಇಲ್ಲಿ ಬೇರೆ ಬೇರೆ ಪದಗಳು ಜೊತೆಯಾಗಿರುತ್ತವೆ. ಹೀಗೆ ಜೊತೆಯಾಗಿ ಬರುವ ಪದಗಳಲ್ಲಿ ಎರಡು ವಿಧದ ಪದಗಳಿರುತ್ತವೆ. ೧. ಎರಡೂ ಪದಗಳಿಗೆ ಬೇರೆ ಬೇರೆ ಅರ್ಥವಿರುತ್ತದೆ. ೨. ಎರಡು ಪದಗಳಲ್ಲಿ ಮೊದಲ ಪದಕ್ಕೆ ನಿರ್ದಿಷ್ಟ ಅರ್ಥವಿದ್ದು, ಎರಡನೆಯ ಪದಕ್ಕೆ ಅರ್ಥವಿರುವುದಿಲ್ಲ.

ಎರಡೂ ಪದಗಳಿಗೆ ಅರ್ಥವಿರುವಂತಹವು: ಸತಿಪತಿ, ಕೆನೆಮೊಸರು, ಹಾಲ್ಜೇನು, ಮಕ್ಕಳುಮರಿ ಇತ್ಯಾದಿಪದಗಳು.

ಮೊದಲ ಪದಕ್ಕೆ ಮಾತ್ರ ಅರ್ಥವಿರುವಂತಹವು : ಕಾಫಿಗೀಫಿ, ಹುಳಹುಪ್ಪಡಿ, ದೇವರುಗೀವರು ಇತ್ಯಾದಿ.



## ಭಾಷಾ ಚಟುವಟಿಕೆ

ಈಗೀಗ, ತಿರುತಿರುಗಿ, ಬಟ್ಟೆಬರೆ, ಒಬ್ಬೊಬ್ಬ, ಸೊಪ್ಪುಸದೆ, ಹುಳಹುಪ್ಪಡಿ (ದ್ವಿರುಕ್ತಿ ಪದಗಳನ್ನು ಆರಿಸಿ ಬರೆಯಿರಿ)

## ಹೆಚ್ಚಿನ ಓದು

ಗೊರೂರು ರಾಮಸ್ವಾಮಿ ಅಯ್ಯಂಗಾರರ **ಅಮೆರಿಕದಲ್ಲಿ ಗೊರೂರು,** ಡಾ.ಪ್ರಭುಶಂಕರರ **ಅಮೆರಿಕದಲ್ಲಿ ನಾನು ಮತ್ತು ಶಾಂತಿ** ಕೃತಿಗಳನ್ನು ಓದಿ.

* * * * *

## ಗದ್ಯಪಾಠ – ೦೩

# ಜೀವನದೃಷ್ಟಿ

– ವಿ.ಕೃ. ಗೋಕಾಕ್

**ಮುನ್ನುಡಿ :** ಮನುಷ್ಯ ಸಂಘಜೀವಿ ಹಾಗೂ ಸಮಾಜಜೀವಿ. ಹೀಗಿದ್ದೂ ಕೆಲವರು – ಕೆಸರಿನಲ್ಲಿನ ಕಮಲದಂತೆ–ಭಾವನಾಜೀವಿಗಳಾಗಿ ತಮ್ಮದೇ ಆದ ಗುಂಗಿನಲ್ಲಿರುತ್ತಾರೆ. ಬೇರೆಯವರಿಗೆ ಹೊರೆಯಾಗದಂತೆ ತಮ್ಮಿಂದಾಗಬಹುದಾದ ಒಳಿತನ್ನು ಮಾತ್ರ ಚಿಂತಿಸುತ್ತಾ ಅಂತರ್ಮುಖಿಗಳಾಗುತ್ತಾರೆ. ಬಾಹ್ಯ ಜಗತ್ತಿನ ಒಳಿತು ಕೆಡಕುಗಳಿಗೂ ಇವರಿಗೂ ಸಂಬಂಧವಿಲ್ಲವೇನೋ ಎಂಬಂತೆ ಕಂಡುಬಂದರೂ ವಾಸ್ತವದಲ್ಲಿ ಆ ಬಗೆಗೆ ಇವರ ಚಿಂತನೆಯಿರುತ್ತದೆ. ಅಂತರ್ಮುಖಿಯಾದ ಅಂತರ್ಜೀವಿಯ ಚಿಂತನೆಗಳ ಸ್ವರೂಪವನ್ನು ಪರಿಚಯಿಸಿ ಶ್ರೀಸಾಮಾನ್ಯನಿಗೂ ಸಾಧಕನಿಗೂ ಇರುವ ಮನೋಭಾವನೆಗಳ ಅಂತರವನ್ನು ಸ್ಥೂಲವಾಗಿ ಅವಲೋಕಿಸಲಾಗಿದೆ.

**ಅರ್ಥೈಸಿ ಓದಿ**

| | | | | | |
|---|---|---|---|---|---|
| **ಆತ್ಮ,** | **ಸರ್ವಜ್ಞ,** | **ಅಂತರ್‌ಜೀವಿ,** | **ಸಾಹಿತಿ,** | **ಕಲೋಪಾಸಕ,** | **ಮನುಕುಲ** |
| **ಮತ,** | **ತಪಸ್ಸು** | **ಗೃಹಸ್ಥಾಶ್ರಮ,** | **ಉಪಾಸನೆ,** | **ಸ್ವಾನುಭೂತಿ,** | |



'ಆತ್ಮಾನಂ ಸರ್ವ ಭೂತೇಷು, ಸರ್ವ ಭೂತಾನಿಚಾತ್ಮನಿ" ಎಂದು ಗೀತೆಯು ಹೇಳಿದೆ. 'ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಾಣಮಕ್ಕು' ಎಂದು ಸರ್ವಜ್ಞನು ಉಸಿರಿದ್ದಾನೆ. 'To see ourselves as others see us' ಉಳಿದವರ ಕಣ್ಣಿನಲ್ಲಿ ಹೊಕ್ಕು ಅವರು ನಮ್ಮನ್ನು ಯಾವ ದೃಷ್ಟಿಯಿಂದ ಕಾಣುವರೋ ಆ ದೃಷ್ಟಿಯಿಂದ ನಾವು ನಮ್ಮನ್ನು ಕಂಡುಕೊಳ್ಳಬೇಕು ಎಂದು ಬರ್ನ್ಸ್ ಕವಿ ಹೇಳಿದ್ದಾನೆ. ಅಂತೂ ನಮ್ಮ ಜೀವನದಲ್ಲಿ ಅನ್ಯರ ದೃಷ್ಟಿಕೋನಕ್ಕೂ ಅನ್ಯರ ಜೀವನದಲ್ಲಿ ನಮ್ಮ ದೃಷ್ಟಿಕೋನಕ್ಕೂ ಒಂದು ಹೆಚ್ಚಿನ ಸ್ಥಾನವಿದೆ.

ಅಂತರ್ಜೀವಿಗೆ ಉಳಿದವರ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಒಂದು ದೊಡ್ಡ ಸಮಸ್ಯೆಯಾಗುತ್ತದೆ. ತನ್ನ ಯೋಗಕ್ಷೇಮವನ್ನೇ ಭಗವಂತನ ಮೇಲೆ ಹೊರಿಸಲು ಹೊರಟ ಅವನಿಗೆ ಉಳಿದವರ ಯೋಗಕ್ಷೇಮವನ್ನು ಹೊರುವ ಕಲ್ಪನೆಯು ಧ್ಯೇಯಗಳ ಜಗತ್ತಿನಲ್ಲಿ ಹೊಳೆಯುವುದು; ಸುಲಭವಾಗಿ ರಕ್ತಗತವಾಗುವುದಿಲ್ಲ. ಉಳಿದವರನ್ನು ಪ್ರೀತಿಯಿಂದ ಅವನು ಕಾಣಬಲ್ಲ. ತನ್ನಿಂದ ಆದಷ್ಟು ಯಾರಿಗೂ ತೊಂದರೆಯಾಗಿರಬಾರದೆಂದು ಅವನು ಎಚ್ಚರಪಡಬಲ್ಲ. ಸಾಹಿತ್ಯಿಕ ದೃಷ್ಟಿಯಿಂದ ಪರಾಂತಃಕರಣವನ್ನು ಪ್ರವೇಶಿಸಿ ಅದನ್ನು ತಿಳಿದುಕೊಳ್ಳಲೂ ಬಲ್ಲ. ಆದರೆ ಉಳಿದ ಹೃದಯಗಳ ಆಸೆಗಳನ್ನು ತಾನಾಗಿಯೇ ಅಭ್ಯಸಿಸಿ ಅವುಗಳನ್ನು ಕಳೆಯಲು ಹವಣಿಸುವುದು ಅವನ ಸಹಜ ಸಿದ್ಧಿಯಾಚೆಗಿನ ಮಾತು. ಏಕೆಂದರೆ ತನ್ನ ಮನದ ಮೊಗಸಾಲೆಯನ್ನು ಓರಣವಾಗಿಸುವುದರಲ್ಲಿಯೇ ಅವನ ಎಲ್ಲ ಶಕ್ತಿಯೂ ವೆಚ್ಚವಾಗುತ್ತಿರುತ್ತದೆ. ತನ್ನ ಅಂತರಂಗದ ಭವ್ಯತೆಯು ಅವನನ್ನು ಕರೆಯುತ್ತಿರುತ್ತದೆ. ತನ್ನ ಗುಂಗಿನಲ್ಲಿದ್ದ ಈ ಅಂತರ್ಜೀವಿಗೆ ಪರರ ಹಂಗೆಲ್ಲಿ?

ಒಬ್ಬ ಹಿರಿಯ ಸಾಹಿತಿ ಹೇಳುತ್ತಿದ್ದ ಮಾತು ಇದು ; ಕಲೋಪಾಸಕನಿಗೆ ಸಮಾಜದಲ್ಲಿ ಯಾವ ಹೊಣೆಯೂ ಇರಬಾರದು. ಸಮಾಜದ ಕಲ್ಯಾಣವನ್ನು ಪೋಷಿಸುವ ಒಂದು ಶಕ್ತಿಯು ಅವನಲ್ಲಿರುತ್ತದೆ. ಅದಕ್ಕಾಗಿ ಅವನನ್ನು ಪೋಷಿಸುವ ಹೊಣೆಯು ಸಮಾಜದ ಮೇಲೆ. ಅವನು ಅಂಗಡಿಗೆ ಹೋಗಲಿ, ಹೋಟೆಲಿಗೆ ಹೋಗಲಿ–ಅವನು ಕಲೋಪಾಸಕನೆಂಬುದನ್ನು ತಿಳಿದ ಕೂಡಲೆ ಎಲ್ಲ ವ್ಯಕ್ತಿಗಳೂ ಅವನ ಆವಶ್ಯಕತೆಗಳನ್ನು ಪೂರೈಸಬೇಕು.

ಆದರೆ ಸಾಮಾಜಿಕ ಹಾಗು ನೈತಿಕ ಇಲ್ಲವೆ ಅನ್ಯೋನ್ಯ ಆಚಾರಗಳಲ್ಲಿಯೂ ಸಾಹಿತಿಗೆ– ಇಲ್ಲವೆ ಅಂತರ್ಜೀವಿಗೆ– ಇಂಥ ಸವಲತ್ತುಗಳನ್ನು ಕೊಡಬಹುದೆ? ಸಮಾಜಕ್ಕೆ, ಸ್ನೇಹಿತರಿಗೆ, ನೆರೆಹೊರೆಯವರಿಗೆ ಇಂಥ ಜೀವಿಯೂ ಕೆಲವೊಂದು ಕರ್ತವ್ಯಗಳಿಂದ ಬದ್ಧನಾಗಿರುವುದಿಲ್ಲವೆ? ಕಲೋಪಾಸಕನೂ ಒಬ್ಬ ವ್ಯಕ್ತಿ; ಸಮಾಜದ–ಮನುಕುಲದ–ಒಂದು ಘಟಕ. ಮುಖ್ಯವಾಗಿ ಕಲೋಪಾಸಕನೆಂದು ಕಲಾಸೇವೆಯನ್ನು ಸಲ್ಲಿಸುವುದಲ್ಲದೆ ಓರ್ವ ವ್ಯಕ್ತಿಯೆಂದು ಅವನ ವ್ಯಕ್ತಿತ್ವ ವಿಕಾಸವೂ ಕಾಲನಿಯತಿಗನುಸರಿಸಿ ಆಗಬೇಕಾಗಿದೆಯಲ್ಲವೆ? ಪರಾಂತಃಕರಣಪ್ರವೇಶಿಯಾಗಿ ಜನತೆಯ ಮನವನ್ನೂ, ಅಂತಃಕರಣವನ್ನೂ ಅವನು ತಿದ್ದಬಹುದು. ಆದರೆ ಯಾವ ವ್ಯಕ್ತಿಗಳೊಡನೆ ಅವನ ಸಂಬಂಧ ಬರುವುದೋ ಅವರ ಅಂತಃಕರಣವನ್ನು ನೋಯಿಸದಂತೆ– ತನ್ನನ್ನು ಅಲಕ್ಷಿಸಿಯಾದರೂ ಉಳಿದವರ ಹಿತಚಿಂತನೆ ಹಾಗು ಹಿತಸಾಧನೆಯಲ್ಲಿ ತೊಡಗುವುದು ಎಲ್ಲ ವ್ಯಕ್ತಿಗಳಂತೆ ಅವನ ಕರ್ತವ್ಯವೂ ಆಗಿದೆ.

ಇಲ್ಲಿ ಎಲ್ಲ ಧರ್ಮಗಳೂ ಹಾಕಿಕೊಟ್ಟ ಒಂದು ರತ್ನಪಾಠವಿದೆ. ಸಾಧಕನಿಗೆ, ಅಂತರ್‌ಜೀವಿಗೆ– ಯಾವ ತೊಂದರೆಯೂ ಆಗಬಾರದೆಂದು ಎಲ್ಲ ಧರ್ಮಗಳೂ ಅವನನ್ನು ಸಮಾಜವೇ ನೋಡಿಕೊಳ್ಳಬೇಕೆಂದು ಹೇಳಿವೆ. ಧರ್ಮಶಾಲೆಗಳು, ವಿಹಾರಗಳು, ಅನ್ನಛತ್ರಗಳು–ಇವು ಏರ್ಪಟ್ಟಿರುವುದು ಇಂಥವರಿಗಾಗಿ ಹಾಗು ನಿರ್ಗತಿಕರಿಗಾಗಿ. ಅನೇಕ ದೇವಸ್ಥಾನಗಳಲ್ಲಿಯೂ, ಮಠಗಳಲ್ಲಿಯೂ ಇಂಥ ಏರ್ಪಾಟಿದೆ. ಇಂಥ ಸಾಧಕರನ್ನು ಮನೆಯಲ್ಲಿಟ್ಟುಕೊಂಡು ಅವರ ಯೋಗಕ್ಷೇಮವನ್ನು ನೋಡಿಕೊಂಡವರೂ ಉಂಟು.

ಇದು ಸಮಾಜದ ಕರ್ತವ್ಯವಾಯಿತು. ಆದರೆ ಸಾಧಕನ ಕರ್ತವ್ಯವೇನು? ಇನ್ನೊಬ್ಬರ ಮೇಲೆ ಅವನೆಂದಿಗೂ ಭಾರ ಹಾಕಿರಬಾರದು. ಇನ್ನೊಬ್ಬರು ತಾವಾಗಿಯೇ ಕೈಯೆತ್ತಿಕೊಡದೆ ಅವನು ಏನನ್ನೂ ಸ್ವೀಕರಿಸಬಾರದು. ದಾತೃವಿನ ಮನವನ್ನು ಹತ್ತುಸಲ ಪರೀಕ್ಷಿಸಿ ದಾನವನ್ನು ಸ್ವೀಕರಿಸಬೇಕು. ಕೇಳಿ ದೊರಕಿಸಿಕೊಂಡ ಸಾಮಗ್ರಿ–ಸೌಕರ್ಯಗಳ ಮೇಲೆ ನಿಂತ ಸಾಧನೆ–ತಪಸ್ಸು, ಮರವನ್ನು ಆಶ್ರಯಿಸಿ ಬೆಳೆದ ಬಳ್ಳಿಯಂತೆ ಅದಕ್ಕೆ ಸ್ವಯಂಪೂರ್ಣತೆ ಇಲ್ಲ.

ಆದರೆ ಇಂದಿನ ಆಂತರಿಕ ಜೀವಿಯ ಪ್ರಶ್ನೆಯು ಇದಕ್ಕೂ ಸ್ವಲ್ಪ ಬೇರೆಯಾಗಿದೆ. ಅವನು ಹೆಚ್ಚಾಗಿ ಸಮಾಜದ ಮಧ್ಯದಲ್ಲಿಯೇ ಇಂದು ಬಾಳುತ್ತಾನೆ. ಎಲ್ಲರಂತೆ ಸಮಾಜದಲ್ಲಿ ಉದರನಿರ್ವಾಹಕ್ಕಾಗಿ ಒಂದು ಕೆಲಸವನ್ನು ಅಂಟಿಕೊಂಡು ನಿಂತಿರುತ್ತಾನೆ. ಹೀಗಾಗಿ ಅವನು ತನ್ನ ಆಂತರಿಕ ಜೀವನವನ್ನು ಬೆಳೆಸುವ ಹೊತ್ತಿನಲ್ಲಿಯೇ ಸಮಾಜದಲ್ಲಿಯೂ ತೂಕತಪ್ಪದಂತೆ ನಡೆಯಬೇಕಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಅವನು ಯೋಗಸ್ಥನೂ, ಗೃಹಸ್ಥನೂ ಕೂಡಿಯೇ ಆಗಿ ಇಂದು ಬಾಳಬೇಕಾಗಿದೆ. ಗೃಹಸ್ಥಾಶ್ರಮವು ಧನ್ಯವೆಂದು ಕಾಲಿದಾಸನು ಹೇಳುವುದಿಲ್ಲ. ಅವನು ಕಲ್ಪಿಸಿದ ಒಬ್ಬ ಋಷಿ–ಆರಣ್ಯಕ–ಆ ಮಾತನ್ನು ಹೇಳುತ್ತಾನೆ. ದೂರದ ಗುಡ್ಡ ಕಣ್ಣಿಗೆ ನುಣ್ಣಗೆ. ಗೃಹಸ್ಥಾಶ್ರಮದ ಅಗ್ನಿದಿವ್ಯಗಳು ಆರಣ್ಯಕರಿಗೆ ಹೇಗೆ ಗೊತ್ತಾಗಬೇಕು?

ಆದರೂ ಒಂದರ್ಥದಲ್ಲಿ ಗೃಹಸ್ಥಾಶ್ರಮವು ಧನ್ಯವೆಂದೇ ಹೇಳಬೇಕು. ಅದನ್ನು ಆಶ್ರಯಿಸಿದ ಅಂತರ್ ಜೀವಿಗೆ ರಾಜಯೋಗ ಹಾಗು ಕರ್ಮಯೋಗದ ಮಾರ್ಗಗಳೆರಡೂ ತೆರೆದಿರುತ್ತವೆ. ಅವನು ತನ್ನ ಅಂತಃಸಾಗರದಲ್ಲಿ ಮುಳುಗಿ ತಂದ ರತ್ನಗಳನ್ನು ಪರೀಕ್ಷಿಸುವ ರತ್ನರಸಿಕರು ಅವನ ಸುತ್ತಣ ಸಮಾಜದಲ್ಲಿಯೇ ಇರುತ್ತಾರೆ. ಹೆಜ್ಜೆಹೆಜ್ಜೆಗೆ ಅವನ ಪರೀಕ್ಷೆಯಾಗುತ್ತದೆ. ತಪ್ಪಡಿಯಿಟ್ಟೊಡನೆ ಅವನ ತಲೆಗೆ ದಂಡ ಕಟ್ಟಲಾಗುತ್ತದೆ. ಒಮ್ಮೊಮ್ಮೆ ತಪ್ಪಿಲ್ಲದೆಯೂ ಅವನು ದಂಡವನ್ನು ತೆರಬೇಕಾಗಬಹುದು. ಹೀಗೆ ಸಮ್ಯಕ್‌ದರ್ಶನದ ಸಮತೂಕವನ್ನು ಪಡೆಯದೆ ಅವನಿಗೆ ಗತ್ಯಂತರವಿಲ್ಲ.

ಈ ಮಾತು ಸಾಧಿಸದೆ ಯಾವ ವ್ಯಕ್ತಿತ್ವಕ್ಕೂ ಪೂರ್ಣತೆ ಇಲ್ಲ. ಹೆರವರ ಹಿತಚಿಂತನೆ ಮಾಡುವುದು ಸಗುಣಬ್ರಹ್ಮದ ಉಪಾಸನೆಯ ಒಂದು ಭಾಗ. ತನ್ನಂತೆ ಪರರನ್ನು ಬಗೆಯಬೇಕಾದ ಕಾರಣ–ತನ್ನಲ್ಲಿಯೂ ಪರರಲ್ಲಿಯೂ ಒಂದೇ ದೈವಿಕತೆಯು ಗುಪ್ತವಾಗಿ ನೆಲೆಸಿದೆಯೆಂದು, ಇಂಥ ಒಂದು ಸ್ಥೂಲಭಾವನೆಯು ಮನಸ್ಸಿನಲ್ಲಿದ್ದರೂ ಅದನ್ನು ವ್ಯವಹಾರದಲ್ಲಿ ಇಳಿಸುವ ಜಾಣ್ಮೆಯೇ ಒಂದು ಕಲೆ, ಕರ್ಮಕುಶಲತೆ. ಇಂದಿನ ಕಲೋಪಾಸಕನೂ ಅಂತರ್‌ಜೀವಿಯೂ ಈ ಮಾತನ್ನು ತಿಳಿದು ಅದನ್ನು ಅರಗಿಸಿಕೊಳ್ಳಬೇಕು. ಸಾಮಾಜಿಕ ಪುನರ್ಘಟನೆಯಲ್ಲಿ ರಶ್ಯದ ಸಮತಾವಾದವೂ ಭಾರತದ ಆಧ್ಯಾತ್ಮವಾದವೂ ರೂಪಗೊಂಡು ಬೆರೆಯಬೇಕಾಗಿ ದ್ದಂತೆ ಇಂದಿನ ಓರ್ವ ವ್ಯಕ್ತಿಯ ಜೀವನದಲ್ಲಿ ಆಂತರಿಕ ದೃಷ್ಟಿಯ ಹಾಗು ಅನ್ಯರ ಹಿತದೃಷ್ಟಿಗಳ ಪ್ರಜ್ಞೆಯ ಸಮ್ಮಿಲನವಾಗಬೇಕಾಗಿದೆ. ರಸವೇ ಜೀವನ. ರಸದ ಸೂಕ್ಷ್ಮತೆ ವಿಶಾಲತೆಗಳ ವ್ಯತ್ಯಯರಹಿತ ವಿಕಾಸವೇ ವ್ಯಕ್ತಿಜೀವನ. ಸಮರಸವೇ ಸಹಜೀವನ. ಬರಿ ಸ್ವಾನುಭೂತಿಯಿಂದ ಸಾಗುವ ಜೀವನರಥಕ್ಕೆ ಒಗ್ಗಾಲಿಯ ಭೀತಿಯಿದೆ. ಸಹಾನುಭೂತಿಯೂ ಅದರ ಜೋಡಣೆಗೆ ಅವಶ್ಯವಾದುದು.

ಇಂಥ ಸಹಾನುಭೂತಿಗಾಗಿ ಎರಡು ಕಣ್ಣು ಯಾವಾಗಲೂ ತೆರೆದಿರಬೇಕಾಗುತ್ತವೆ: ಒಂದು ತನ್ನಿಂದ ಹೆರವರಿಗೆ ಯಾವ ತೊಂದರೆಯೂ ಮಾನಸಿಕ ವ್ಯಥೆಯೂ ಆಗದಂತೆ ಎಚ್ಚರಪಡುವ ಕಣ್ಣು; ಇನ್ನೊಂದು ತನ್ನ ಅಳವಿನಲ್ಲಿ ಹೆರವರ ಐಹಿಕ, ಮಾನಸಿಕ ಇಲ್ಲವೆ ಆತ್ಮಿಕ ಹಿತಚಿಂತನೆ ಎಲ್ಲೆಲ್ಲಿ ಸಾಧ್ಯ ಎಂದು ಸದಾ ಅಭ್ಯಸಿಸುವ ಕಣ್ಣು. ಅಂತೇ ದೇವರು ಸಾರತಃ ದೃಷ್ಟಿಯಲ್ಲಿ ಒಂದೇ ಆದ ಎರಡು ಕಣ್ಣುಗಳನ್ನು ಮಾನವನಿಗೆ ಕೊಟ್ಟು ಅವನ ಆಂತರಿಕ ವಿಕಾಸಕ್ಕಾಗಿ ಆಜ್ಞಾಚಕ್ರದಲ್ಲಿಯೇ ಒಳಗಣ್ಣನ್ನು ಕೊಟ್ಟಿದ್ದಾನೆ.



## ಕರ್ತೃ–ಭಾವ–ಆಕರ



ವಿನಾಯಕ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಡಾ.ವಿನಾಯಕ ಕೃಷ್ಣ ಗೋಕಾಕ್ (ಕ್ರಿ.ಶ. ೧೯೦೯) ಇವರು ಹಾವೇರಿ ಜಿಲ್ಲೆಯ ಸವಣೂರಿನವರು. ಪುಣೆಯ ಫರ್ಗ್ಯೂಸನ್ ಕಾಲೇಜು, ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ. ಬೆಂಗಳೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ಸೇವೆಸಲ್ಲಿಸಿದ್ದಾರೆ. ನವ್ಯಕನ್ನಡ ಸಾಹಿತ್ಯದ ಪ್ರಮುಖ ಸಾಹಿತಿಗಳಲ್ಲಿ ಒಬ್ಬರಾದ ವಿ.ಕೃ.ಗೋಕಾಕ್ ಅವರು **ಸಮುದ್ರಗೀತೆಗಳು. ಪಯಣ, ಉಗಮ, ಇಜ್ಜೋಡು, ಸಮರಸವೇ ಜೀವನ, ಭಾರತಸಿಂಧುರಶ್ಮಿ** ಮೊದಲಾದ ಕೃತಿಗಳ ಕರ್ತೃ. ಇವರ **ದ್ಯಾವ ಪೃಥಿವೀ** ಕೃತಿಗೆ **ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ಬೆಂಗಳೂರು ವಿಶ್ವವಿದ್ಯಾನಿಲಯದ ಗೌರವ ಡಿ.ಲಿಟ್** ಪದವಿ ಲಭಿಸಿದೆ. **ಸಮಗ್ರಸಾಹಿತ್ಯಕ್ಕಾಗಿ ಜ್ಞಾನಪೀಠ ಪ್ರಶಸ್ತಿಗೂ** ಭಾಜನರಾಗಿದ್ದಾರೆ. ಭಾರತ ಸರ್ಕಾರ **ಪದ್ಮಶ್ರೀ** ಪುರಸ್ಕಾರ ನೀಡಿ ಗೌರವಿಸಿದೆ.

ಸಂಘ ಜೀವಿಯಾದ ಮಾನವನು ಸಮಾಜದಲ್ಲಿ ತನ್ನ ಬದುಕಿನೊಂದಿಗೆ ಇತರರ ಬಗ್ಗೆಯೂ ಚಿಂತಿಸುವುದು ಅನಿವಾರ್ಯ. ಸಹಜೀವನ ಮಾನವನ ಹುಟ್ಟುಗುಣ. ಆದರೆ ಅಂತರ್ಮುಖಿಯಾದ ವ್ಯಕ್ತಿ ಉಳಿದವರನ್ನು ಪ್ರೀತಿ, ಗೌರವದಿಂದ ಕಾಣಬಲ್ಲವನಾದರೂ ತನ್ನ ಯೋಗಕ್ಷೇಮ ವಿಚಾರಿಸುವ ವೈಯಕ್ತಿಕ ವಿದ್ಯಮಾನದಲ್ಲಿ ಹೆಚ್ಚಾಗಿ ತೊಡಗಿಸಿಕೊಳ್ಳುವುದಿಲ್ಲ. ತನ್ನ ಸಾಧನೆಯಿಂದ ಸಮಾಜಕ್ಕೆ ಒಳಿತಾಗಬೇಕೆಂಬ ಸಮಷ್ಟಿ ದೃಷ್ಟಿಯನ್ನು ಹೊಂದಿದವನಾಗಿರುತ್ತಾನೆ.

**ವಿ.ಕೃ.ಗೋಕಾಕ್** ವಿರಚಿತ **ಜೀವನಪಾಠಗಳು** ಎಂಬ ಪ್ರಬಂಧ ಸಂಕಲನದಿಂದ **ಜೀವನದೃಷ್ಟಿ** ಗದ್ಯಭಾಗವನ್ನು ಆಯ್ಕೆಮಾಡಿಕೊಳ್ಳಲಾಗಿದೆ.

## ಪದ–ಅರ್ಥ

ಪರರು–ಅನ್ಯರು, ಬಗೆ–ತಿಳಿ, ಬಿನ್ನಾಣ (ದ್ಭ)–ವಿಜ್ಞಾನ (ತ್ಸ) – ಅಂದ, ಸೊಗಸು, ಹೊಕ್ಕು–ಪ್ರವೇಶಿಸು ; ಧ್ಯೇಯ–ಗುರಿ, ಅಂತಃಕರಣ–ಮನಸ್ಸು ; ಹವಣಿಸು–ಆಲೋಚಿಸು ; ಮೊಗಸಾಲೆ (ದ್ಭ)–ಮುಖಶಾಲೆ (ತ್ಸ) – ಮನೆಮುಂದಿನ ಚಾವಡಿ ; ತನ್ನಗುಂಗು–ಸ್ವಚಿಂತನೆ, ಕಲ್ಯಾಣ–ಒಳಿತು, ಸವಲತ್ತು–ಸೌಲಭ್ಯ, ದಾತೃ(ತ್ಸ)–ದಾತಾರ (ದ್ಭ) – ದಾನಿ ; ಯೋಗಸ್ಥ–ಯೋಗ್ಯತೆಯುಳ್ಳವ ; ಅಗ್ನಿದಿವ್ಯ – ಕಠಿಣವಾದ ಪರೀಕ್ಷೆ ; ಧನ್ಯ–ಕೃತಾರ್ಥ; ಗತ್ಯಂತರ–ಬೇರೆ ಆಶ್ರಯ; ಹೆರವರ–ಅನ್ಯರ; ಉಪಾಸನೆ–ಪೂಜೆ; ಗುಪ್ತ–ರಹಸ್ಯ; ಒಗ್ಗಾಲಿ–ಒಂದುಗಾಲಿ, ಒಂದು ಚಕ್ರ; ಐಹಿಕ–ಲೌಕಿಕ ; ಸಾರತಃ–ನಿರ್ಣಯ.

### ಪಠ್ಯಾಧಾರ ಟಿಪ್ಪಣಿ

**ಆತ್ಮಾನಾಂ ಸರ್ವಭೂತೇಷು, ಸರ್ವಭೂತಾನಿಚಾತ್ಮವಿ :** ಯೋಗಿಯಾದವನು ಆತ್ಮನನ್ನು ಸರ್ವಭೂತಗಳಲ್ಲೂ (ಜೀವಿ) ಸರ್ವಭೂತಗಳನ್ನು ಆತ್ಮನಲ್ಲಿಯೂ ಕಾಣುತ್ತಾನೆ (ಧ್ಯಾನಯೋಗ).

**ಅಗ್ನಿದಿವ್ಯ** : ದೋಷಿ ಎನಿಸಿಕೊಂಡವ ಬೆಂಕಿಯನ್ನು ಮುಟ್ಟಿ ತನ್ನ ನಿರ್ದೋಷಿತ್ವವನ್ನು ಸ್ಥಾಪಿಸಬೇಕಾದ ಒಂದು ಉಗ್ರವಾದ ಶಿಕ್ಷೆ.

**ಕರ್ಮಯೋಗ** : ಯಾವುದೇ ಫಲಾಪೇಕ್ಷೆಯಿಲ್ಲದೆ ತಾನು ಮಾಡಬೇಕಾದ ಕರ್ಮವನ್ನು (ಕೆಲಸವನ್ನು) ಮಾಡುವುದು. ಸಾಂಖ್ಯ, ಕರ್ಮ, ಜ್ಞಾನ, ಭಕ್ತಿ, ಧ್ಯಾನ ಯೋಗಗಳನ್ನೊಳಗೊಂಡ ಭಗವದ್ಗೀತೆಯಲ್ಲಿ ಈ ಕರ್ಮಯೋಗದ ಸವಿವರವಿದೆ. **ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷುಕದಾಚನ**' ಎಂಬ ಶ್ಲೋಕ ಜನಜನಿತವಾದುದು.

**ರಾಜಯೋಗ** : ನಾಲ್ಕು ಯೋಗಗಳಲ್ಲಿ ಒಂದು. ಹಠಯೋಗದಿಂದ ಭಿನ್ನವಾದ ; ಸುಲಭವಾಗಿ ಅಭ್ಯಾಸಮಾಡಬಹುದಾದ ಯೋಗ.

**ಸಮ್ಯಕ್‌ದರ್ಶನ** : ಜೈನಮತದ ಬಗ್ಗೆ ಇರುವ ವಿಶ್ವಾಸ. (ಉತ್ತಮ ದೃಷ್ಟಿ)

**ಸಗುಣಬ್ರಹ್ಮ** : ಸತ್ತ್ವ, ರಜೋ, ತಮೋ ಎಂಬ ತ್ರಿಗುಣಗಳಿಂದ ಕೂಡಿದ ಪರಮಾತ್ಮ

**ಗೃಹಸ್ಥಾಶ್ರಮ** : ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ ಎಂಬ ಚತುರಾಶ್ರಮಗಳಲ್ಲಿ ಮುಖ್ಯವಾದ ಆಶ್ರಮ. ಪುಣ್ಯಸಂಪಾದನೆಗೆ ಅನುಕೂಲಕರವಾದ ಆಶ್ರಮ. ಗೃಹಸ್ಥನಾದವನು ಮನೆಗೆ ಬಂದ ಅತಿಥಿಯನ್ನು ದೇವರ ರೂಪದಲ್ಲಿ ಕಂಡು ಸಪತ್ನೀಕನಾಗಿ ಸತ್ಕರಿಸಬೇಕಾದುದು ಗೃಹಸ್ಥಾಶ್ರಮದ ಧರ್ಮ.

**ಬರ್ನ್ಸ್‌ಕವಿ** : ರಾಬರ್ಟ್‌ಬರ್ನ್ಸ್ ಎಂಬ ಈಗ ಸ್ಕಾಟ್‌ಲ್ಯಾಂಡಿನ ರಾಷ್ಟ್ರಕವಿ.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧. ಜೀವನದಲ್ಲಿ ಯಾವುದಕ್ಕೆ ಹೆಚ್ಚಿನ ಸ್ಥಾನವಿದೆ?

೨. ಅಂತರ್‌ಜೀವಿಗೆ ಯಾವುದು ದೊಡ್ಡ ಸಮಸ್ಯೆಯಾಗುತ್ತದೆ?

೩. ಅಂತರ್‌ಜೀವಿಯ ಶಕ್ತಿ ಹೇಗೆ ವೆಚ್ಚವಾಗುತ್ತಿರುತ್ತದೆ?

೪. ಧರ್ಮಗಳು ಹಾಕಿಕೊಟ್ಟಿರುವ ರತ್ನಪಾಠ ಏನು?

೫. ಗೃಹಸ್ಥಾಶ್ರಮವು ಧನ್ಯ ಎಂದು ಹೇಳಿದವರು ಯಾರು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ಅಂತರ್‌ಜೀವಿಗೆ ಸುಲಭವಾಗಿ ರಕ್ತಗತವಾಗದ ಸಂಗತಿ ಯಾವುದು?

೨. ಕಲೋಪಾಸಕನ ಕರ್ತವ್ಯ ಏನು?

೩. ಸಾಧಕನ ಯೋಗಕ್ಷೇಮವನ್ನು ಸಮಾಜ ಹೇಗೆ ನಿರ್ವಹಿಸುತ್ತಿತ್ತು?

೪. ಸಹಾನುಭೂತಿಗಾಗಿ ಇರಬೇಕಾದ ಎರಡು ಕಣ್ಣುಗಳಾವುವು?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು-ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. **ಜೀವನದೃಷ್ಟಿ** ಗದ್ಯದಲ್ಲಿ ಅಂತರ್‌ಜೀವಿಯ ವ್ಯಕ್ತಿತ್ವ ಹೇಗೆ ವರ್ಣಿತವಾಗಿದೆ?

೨. ಸಮಾಜದಲ್ಲಿ ಕಲೋಪಾಸಕನ ಮಹತ್ವವನ್ನು ವಿ.ಕೃ.ಗೋಕಾಕ್ ಹೇಗೆ ವಿಶ್ಲೇಷಿಸಿದ್ದಾರೆ?

**ಈ. ಸಂದರ್ಭದೊಂದಿಗೆ ಸ್ವಾರಸ್ಯವನ್ನು ವಿವರಿಸಿ.**

೧. "ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಾಣಮಕ್ಕು".

೨. "ತನ್ನ ಗುಂಗಿನಲ್ಲಿದ್ದ ಈ ಅಂತರ್ಜೀವಿಗೆ ಪರರ ಹಂಗೆಲ್ಲಿ?"

೩. "ಕಲೋಪಾಸಕನಿಗೆ ಸಮಾಜದಲ್ಲಿ ಯಾವ ಹೊಣೆಯೂ ಇರಬಾರದು."

೪. "ದಾತೃವಿನ ಮನವನ್ನು ಹತ್ತುಸಲ ಪರೀಕ್ಷಿಸಿ ದಾನವನ್ನು ಸ್ವೀಕರಿಸಬೇಕು."

೫. "ಜೀವನರಥಕ್ಕೆ ಒಗ್ಗಾಲಿಯ ಭೀತಿಯಿದೆ."

**ಉ. ಹೊಂದಿಸಿ ಬರೆಯಿರಿ.**

| | ಅ | ಬ |
|---|---|---|
| ೧. | ಕಲೋಪಾಸಕ | ಬಹಿರಂಗ |
| ೨. | ವಿನಾಯಕ | ಋಷಿ |
| ೩. | ಅಂತರಂಗ | ಗುಣಸಂಧಿ |
| ೪. | ದೂರದ ಗುಡ್ಡ | ಕಲಾವಿದ |
| ೫. | ಆರಣ್ಯಕ | ಕಣ್ಣಿಗೆ ನುಣ್ಣಗೆ |
| | | ವಿ.ಕೃ. ಗೋಕಾಕ್ |

# ಸೈದ್ಧಾಂತಿಕ ಭಾಷಾಭ್ಯಾಸ

## ಕಾಲ

ಧಾತುಗಳಿಗೆ **'ಉತ್ತ'** ಎಂಬ ಕಾಲಸೂಚಕ ಪ್ರತ್ಯಯ ಸೇರಿದಾಗ **ವರ್ತಮಾನ** ಕಾಲರೂಪವೂ **'ದ'** ಎಂಬ ಪ್ರತ್ಯಯ ಸೇರಿದಾಗ **ಭೂತಕಾಲ**ರೂಪವೂ **'ವ'** ಎಂಬ ಪ್ರತ್ಯಯ ಸೇರಿದಾಗ **ಭವಿಷತ್** ಕಾಲರೂಪವೂ ಉಂಟಾಗುತ್ತದೆ. ಧಾತುಗಳಿಗೆ **ಕಾಲಸೂಚಕದ** ಜೊತೆಗೆ **ಆಖ್ಯಾತ ಪ್ರತ್ಯಯ**ಗಳು ಸೇರಿದಾಗ **ಪುರುಷವಾಚಕ**ಗಳಿಗೆ ಅನುಗುಣವಾಗಿ ಬೇರೆಬೇರೆ ರೂಪಗಳನ್ನು ಹೊಂದುತ್ತವೆ.

**ಉದಾ:**

| **ಕಾಲ** | **ಉತ್ತಮಪುರುಷ** | **ಮಧ್ಯಮಪುರುಷ** | **ಅನ್ಯಪುರುಷ** |
|---|---|---|---|
| ವರ್ತಮಾನಕಾಲ | ತಿನ್ನುತ್ತೇನೆ. | ತಿನ್ನುತ್ತಿ | ತಿನ್ನುತ್ತಾನೆ. |
| ಭೂತಕಾಲ | ತಿಂದೆನು | ತಿಂದೆ | ತಿಂದನು |
| ಭವಿಷತ್‌ಕಾಲ | ತಿನ್ನುವೆನು | ತಿನ್ನುವೆ | ತಿನ್ನುವನು. |

**ಕಾಲ ಪಲ್ಲಟ :** ಒಂದು ಕಾಲದ ಕ್ರಿಯೆಯನ್ನು ಇನ್ನೊಂದು ಕಾಲದ ಕ್ರಿಯಾರೂಪದಿಂದ ಹೇಳುವುದೇ ಕಾಲಪಲ್ಲಟ, ಹೀಗೆ ಕಾಲ ಪಲ್ಲಟವಾಗುವಾಗ ಭವಿಷತ್ ಕಾಲದ ಕ್ರಿಯಾಪದಗಳು ವರ್ತಮಾನಕಾಲದಲ್ಲೂ ವರ್ತಮಾನಕಾಲದ ಕ್ರಿಯಾಪದಗಳು ಭವಿಷತ್ ಕಾಲದಲ್ಲೂ ಪ್ರಯೋಗವಾಗುವುವು.

**ಉದಾ :** ೧. ವರ್ತಮಾನಕಾಲವು ಭವಿಷತ್ ಕಾಲದಲ್ಲಿ

–ಅವನು ಒಳಗೆ ಊಟ ಮಾಡುವನು (ಊಟಮಾಡುತ್ತಾನೆ. ಎಂದಾಗಬೇಕು)

೨. ಭವಿಷತ್‌ಕಾಲವು ವರ್ತಮಾನ ಕಾಲದಲ್ಲಿ

–ಅವಳು ಮುಂದಿನ ವಾರ ಬರುತ್ತಾಳೆ (ಬರುವಳು ಎಂದಾಗಬೇಕು)



## ಪತ್ರಲೇಖನ

**ಈಗಾಗಲೇ ಹಿಂದಿನ ತರಗತಿಗಳಲ್ಲಿ ರಜಾಅರ್ಜಿ, ಬಂಧುಗಳಿಗೆ ಬರೆಯುವ ಪತ್ರಗಳ ಬಗ್ಗೆ ತಿಳಿದು ಕೊಳ್ಳಲಾಗಿದೆ. ಈ ತರಗತಿಯಲ್ಲಿ ಉಳಿದ ಕೆಲವು ಮಾದರಿಗಳನ್ನು ತಿಳಿದುಕೊಳ್ಳೋಣ.**

**ವಿನಂತಿ ಪತ್ರ :**

**ನಿಮ್ಮ ಬೀದಿಗೆ ದಾರಿದೀಪ ಹಾಕಿಸುವಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ಪತ್ರ ಬರೆಯಿರಿ.**

ವಾಮದಪದವು,
೨೦–೬–೨೦೧೪.

ರಾಮಚಂದ್ರ,
ಗಿರಿಸದನ,
ಚೆನ್ನೈತ್ತೋಡಿಗ್ರಾಮ,
ಅಂಚೆ : ವಾಮದಪದವು
ಬಂಟ್ವಾಳತಾಲೂಕು
ದಕ್ಷಿಣ ಕನ್ನಡ ಜಿಲ್ಲೆ – ಇವರು

ಮಾನ್ಯ ಅಧ್ಯಕ್ಷರು,
ಗ್ರಾಮ ಪಂಚಾಯಿತಿ ಕಚೇರಿ,
ವಾಮದಪದವು,
ಬಂಟ್ವಾಳ ತಾಲೂಕು,
ದಕ್ಷಿಣ ಕನ್ನಡ ಜಿಲ್ಲೆ. – ಇವರಿಗೆ ಬರೆದ ಮನವಿ ಪತ್ರ.

ಮಾನ್ಯರೇ,

**ವಿಷಯ :** ಬೀದಿ ದೀಪ ಅಳವಡಿಸುವ ಕುರಿತು.

ವಾಮದಪದವಿನಿಂದ ಚೆನ್ನೈತ್ತೋಡಿಗ್ರಾಮಕ್ಕೆ ಹೋಗುವ ರಸ್ತೆಯಲ್ಲಿ ಪ್ರತಿನಿತ್ಯ ನೂರಾರು ಮಂದಿ ಸಂಚರಿಸುತ್ತಾರೆ. ಈ ರಸ್ತೆ ನಿರ್ಮಾಣಗೊಂಡು ಈಗಾಗಲೇ ಹದಿನೈದು ವರ್ಷಗಳಾಗಿವೆ. ಚೆನ್ನೈತ್ತೋಡಿಗ್ರಾಮದಲ್ಲಿ ಸುಮಾರು ಎಪ್ಪತ್ತು ಮನೆಗಳಿಗೆ ಹೋಗಲು ಈ ರಸ್ತೆ ಪ್ರಮುಖವಾಗಿದೆ. ಆದರೆ ರಸ್ತೆ ಹೊಂಡಮಯವಾಗಿರುವರಿಂದ ಹಾಗೂ ಕಾಡಿನ ಮಧ್ಯೆ ಹಾದು ಹೋಗುವುದರಿಂದ ರಾತ್ರಿ ಹೊತ್ತಿನಲ್ಲಿ ಸಂಚಾರಕ್ಕೆ ತುಂಬಾ ತೊಂದರೆಯಾಗುತ್ತಿದೆ. ಆದುದರಿಂದ ಗ್ರಾಮ ಪಂಚಾಯಿತಿಯ ವತಿಯಿಂದ ದಾರಿದೀಪ ಹಾಕಿಸಬೇಕಾಗಿ ಈ ಮೂಲಕ ಪ್ರಾರ್ಥಿಸಿಕೊಳ್ಳುತ್ತೇನೆ.

ಧನ್ಯವಾದಗಳೊಂದಿಗೆ–

ಇತಿ ತಮ್ಮ ವಿಶ್ವಾಸಿ,
ಸಹಿ......................
(ರಾಮಚಂದ್ರ)

(ಊರಿನ ನಾಗರಿಕರಲ್ಲಿ ಐವತ್ತು ಜನರು ಈ ವಿನಂತಿ ಪತ್ರಕ್ಕೆ ಸಹಿ ಹಾಕಿರುತ್ತಾರೆ.)

ಇವರಿಗೆ____

ಮಾನ್ಯ ಅಧ್ಯಕ್ಷರು
ಗ್ರಾಮ ಪಂಚಾಯಿತಿ ಕಚೇರಿ
ವಾಮದಪದವು ಅಂಚೆ
ಬಂಟ್ವಾಳ ತಾಲೂಕು
ದಕ್ಷಿಣ ಕನ್ನಡ ಜಿಲ್ಲೆ – ೫೭೪೩೩೧



## ಭಾಷಾ ಚಟುವಟಿಕೆ

೧. **ಕೊಟ್ಟಿರುವ ಸೂಚನೆಯಂತೆ ಉತ್ತರಿಸಿ.**

ಅ. ಅಂತರ್‌ಜೀವಿಯು ಹೆಚ್ಚಾಗಿ ಸಮಾಜದ ಮಧ್ಯದಲ್ಲಿಯೇ ಜೀವಿಸುತ್ತಾನೆ. (ಭವಿಷತ್‌ಕಾಲಕ್ಕೆ ಪರಿವರ್ತಿಸಿ)

ಆ. ರತ್ನಗಳನ್ನು ಪರೀಕ್ಷಿಸುವ ರತ್ನರಸಿಕರು ಅಂತರ್ ಜೀವಿಯ ಸಮಾಜದಲ್ಲಿಯೇ ಇರುವರು. (ವರ್ತಮಾನಕಾಲಕ್ಕೆ ಪರಿವರ್ತಿಸಿ)

ಇ. ಅವನು ಹೆಚ್ಚಾಗಿ ಸಮಾಜದ ಮಧ್ಯದಲ್ಲಿಯೇ ಬಾಳುತ್ತಾನೆ. (ಭೂತಕಾಲಕ್ಕೆ ಪರಿವರ್ತಿಸಿ)

## ಹೆಚ್ಚಿನ ಓದು

**ವಿನಾಯಕರ 'ಸಮರಸವೇ ಜೀವನ'** ಕೃತಿಯನ್ನು ಓದಿ.

* * * * *

# ಧರ್ಮಸಮದೃಷ್ಟಿ

**ಶಾಸನ**

**ಮುನ್ನುಡಿ :** ಪ್ರಾಚೀನ ಸಮಾಜವನ್ನು ಅರ್ಥಮಾಡಿಕೊಂಡು ಸಾಂಸ್ಕೃತಿಕ ಮಹತ್ವವನ್ನು ಗ್ರಹಿಸಲು ಇರುವ ಆಕರಗಳಲ್ಲಿ ಶಾಸನಸಾಹಿತ್ಯ ಒಂದು. ದಾನ–ದತ್ತಿಶಾಸನಗಳು, ವೀರಗಲ್ಲುಗಳು, ಮಾಸ್ತಿ ಕಲ್ಲುಗಳು ಪ್ರಾಚೀನ ಸಾಹಿತ್ಯ, ಸಂಸ್ಕೃತಿಗಳನ್ನು ಅರ್ಥಮಾಡಿಕೊಳ್ಳಲು ಸಹಕಾರಿಯಾಗಿವೆ. ಹಿಂದೂ, ಕ್ರೈಸ್ತ, ಮುಸಲ್ಮಾನ, ಬೌದ್ಧ, ಜೈನ, ಪಾರಸಿಕರ ಉದ್ಯಾನದಂತಿರುವ ಭಾರತದಲ್ಲಿರುವ ಮತೀಯ ಸಾಮರಸ್ಯಕ್ಕೆ ಐತಿಹಾಸಿಕ ಹಿನ್ನೆಲೆಯಿದೆ. ಸಾಮಾಜಿಕ ಸಾಮರಸ್ಯಕ್ಕೊಂದು ದಾಖಲೆಯಂತಿರುವ ಶಾಸನವೊಂದನ್ನು ಇಲ್ಲಿ ಪರಿಚಯಿಸಲಾಗಿದೆ.

ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಶಾಸನಗಳು ಹೇಗೆ ಪೂರಕವಾಗಿವೆ? ಎಂಬುದನ್ನು ಇಲ್ಲಿನ ಶಾಸನದ ಮೂಲಕ ತಿಳಿಯಬಹುದು.

## ಅರ್ಥೈಸಿ–ಓದಿ

**ಪಾಷಂಡ, ಮಹಾಬಡವಾಮುಖಾಗ್ನಿ ಮಂಡಳೇಶ್ವರ, ರಾಯರಗಂಡ, ಭವ್ಯಜನಂಗಳು, ಪಂಚಮಹಾವಾದ್ಯಗಳು ಚಂದ್ರಾರ್ಕಸ್ಥಾಯಿ**

**ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ**

ಪಾಷಂಡ ಸಾಗರ ಮಹಾಬಡವಾಮುಖಾಗ್ನಿಃ
ಶ್ರೀರಂಗರಾಜ ಚರಣಾಂಬುಜ ಮೂಲದಾಸಃ
ಶ್ರೀ ವಿಷ್ಣುಲೋಕ ಮುನಿಮಂಟಪ ಮಾರ್ಗದಾಯೀ
ರಾಮಾನುಜೋ ವಿಜಯತೇ ಯತಿರಾಜರಾಜಃ



ಶಕವರ್ಷ೧೨೯೦ನೆಯ ಕೀಲಕ ಸಂವತ್ಸರದ ಭಾದ್ರಪದ ಶು॥ ೧೦ ಬೃ ॥ ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರಂ ಅರಿರಾಯ ವಿಭಾಡ ಭಾಷೆಗೆ ತಪ್ಪುವ ರಾಯರಗಂಡ ಶ್ರೀ ವೀರಬುಕ್ಕರಾಯನು ಪೃಥ್ವೀರಾಜ್ಯವ ಮಾಡುವ ಕಾಲದಲ್ಲಿ ಜೈನರಿಗೂ ಭಕ್ತರಿಗೂ ಸಂವಾದದಲ್ಲಿ ಆನೆಯಗೊಂದಿ ಹೊಸಪಟ್ಟಣ ಪೆನುಗೊಂಡೆ ಕಲ್ಲೆಹದ ಪಟ್ಟಣವೊಳಗಾದ ಸಮಸ್ತ ನಾಡ ಭವ್ಯಜನಂಗಳು ಆ ಬುಕ್ಕರಾಯಂಗೆ ಭಕ್ತರು ಮಾಡುವ ಅನ್ಯಾಯಂಗಳನು ಬಿನ್ನಹಂ ಮಾಡಲಾಗಿ ಕೋವಿಲ್ ತಿರುಮಲೆಪೆರುಮಾಳ್ ಕೋವಿಲ್ ತಿರುನಾರಾಯಣಪುರ ಮುಖ್ಯವಾದ ಸಕಳಾಚಾರ್ಯರೂ ಸಕಳ ಸಮಯಿಗಳೂ ಸಕಳ ಸಾತ್ವಿಕರೂ ಮೋಷ್ಟಿಕರೂ ತಿರುಪಣಿ ತಿರುವಿಡಿ ತಣ್ಣೀರವರೂ ನಾಲ್ವತ್ತೆಂಟು ಜನಂಗಳೂ ಸಾವಂತ ಬೋವಕ್ಕಳೂ ತಿರಿಕುಲ ಜಾಂಬುವಕುಲವೊಳಗಾದ ಹದಿನೆಂಟು ನಾಡ

ಶ್ರೀವೈಷ್ಣವರ ಕೈಯ್ಯಲು ಮಹಾರಾಯನು ವೈಷ್ಣವ ದರ್ಶನಕ್ಕೆಯೂ ಜೈನದರ್ಶನಕ್ಕೆಯೂ ಭೇದವಿಲ್ಲವೆಂದು ರಾಯನು ವೈಷ್ಣವರ ಕೈಯಲು ಜೈನರ ಕೈವಿಡಿದುಕೊಟ್ಟು ಈ ಜೈನದರ್ಶನಕ್ಕೆ ಪೂರ್ವ ಮರ್ಯಾದೆಯಲು ಪಂಚಮಹಾವಾದ್ಯಂಗಳೂ ಕಳಶವೂ ಸಲುವುದು ಜೈನದರ್ಶನಕ್ಕೆ ಭಕ್ತರ ದೆಸೆಯಿಂದ ಹಾನಿವೃದ್ಧಿಯಾದರೂ ವೈಷ್ಣವ ಹಾನಿವೃದ್ಧಿಯಾಗಿ ಪಾಲಿಸುವರು ಈ ಮರ್ಯಾದೆಯಲು ಎಲ್ಲಾ ರಾಜ್ಯದೊಳಗುಳ್ಳಂತಹ ಬಸ್ತಿಗಳಿಗೆ ಶ್ರೀವೈಷ್ಣವರು ಶಾಸನವ ನಟ್ಟು ಪಾಲಿಸುವರು ಚಂದ್ರಾರ್ಕಸ್ಥಾಯಿಯಾಗಿ ವೈಷ್ಣವ ಸಮಯವು ಜೈನದರ್ಶನವ ರಕ್ಷಿಸಿಕೊಂಡು ಬಹೆವು ವೈಷ್ಣವರೂ ಜೈನರೂ ಒಂದು ಭೇದವಾಗಿ ಕಾಣಲಾಗದು ಶ್ರೀ ತಿರುಮಲೆಯ ತಾತಯ್ಯಂಗಳು ಸಮಸ್ತ ರಾಜ್ಯದ ಭವ್ಯ ಜನಂಗಳ ಅನುಮತದಿಂದ ಬೆಳುಗುಳದ ತೀರ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತ ರಾಜ್ಯದೊಳಗುಳ್ಳಂತಹ ಜೈನರ ಬಾಗಿಲುಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣಕೊಟ್ಟು ಆ ಎತ್ತಿದ ಹೊನ್ನಿಂಗೆ ದೇವರ ಅಂಗರಕ್ಷೆಗೆ ಯಿಪ್ಪತ್ತಾಳನೂ ಸಂತವಿಟ್ಟು ಮಿಕ್ಕಹೊನ್ನಿಂಗೆ ಜೀರ್ಣಜಿನಾಲಯಂಗಳಿಗೆ ಸೊದೆಯನಿಕ್ಕುವುದು ಈ ಮರಿಯಾದೆಯಲು ಚಂದ್ರಾರ್ಕರುಳ್ಳನ್ನಂ ತಪ್ಪಲೀಯದೆ ವರ್ಷ ವರ್ಷಕ್ಕೆ ಕೊಟ್ಟು ಕೀರ್ತಿಯನೂ ಪುಣ್ಯವನೂ ಉಪಾರ್ಜಿಸಿಕೊಂಬುದು ಈ ಮಾಡಿದ ಕಟ್ಟಳೆಯನು ಆವನೊಬ್ಬನು ಮಿಾಱಿದವನು ರಾಜದ್ರೋಹಿಯಪ್ಪನು.

## ಭಾವ – ಆಕರ

ಧರ್ಮಸಮದೃಷ್ಟಿ ಶಾಸನ (೧೩೬೮) ವಿಜಯನಗರ ಸಾಮ್ರಾಜ್ಯದ ಅರಸ ವೀರ ಬುಕ್ಕರಾಯನಿಗೆ ಸಂಬಂಧಿಸಿದ್ದಾಗಿದೆ. ಮತಧರ್ಮದ ಸಂಘರ್ಷದಲ್ಲಿ ಜೈನರು ಹಾಗೂ ವೈಷ್ಣವರು ಸಾಮರಸ್ಯದಿಂದ ಬಾಳಬೇಕೆಂಬ ಆಶಯದಿಂದ ವಿಧಿಸಿದ ಕಟ್ಟಳೆಯಿದು. ವೀರ ಬುಕ್ಕರಾಯನ ಉದಾತ್ತತೆಯನ್ನೂ ಧರ್ಮಸಮನ್ವಯ ದೃಷ್ಟಿಯನ್ನೂ ಈ ಶಾಸನ ಬಿಂಬಿಸುತ್ತದೆ.

ಭಕ್ತರು ಮಾಡುವ ಅನ್ಯಾಯವನ್ನು ಪೆನುಗೊಂಡೆಯ ಜೈನರು ಬಿನ್ನಹ ಮಾಡಿದಾಗ ಬುಕ್ಕರಾಯನು ವೈಷ್ಣವರು ಹಾಗೂ ಜೈನ ಪ್ರಮುಖರ ಕೈಹಿಡಿದು ಸಾಮರಸ್ಯದಿಂದ ಬಾಳಬೇಕೆಂದೂ ವೈಷ್ಣವ ಧರ್ಮಕ್ಕೂ ಜೈನಧರ್ಮಕ್ಕೂ ಯಾವುದೇ ಭೇದವಿಲ್ಲವೆಂದೂ ಪರಸ್ಪರರು ಪೂರ್ವ ಸಂಪ್ರದಾಯದಂತೆ ಹೊಂದಾಣಿಕೆಯಿಂದಿರಬೇಕೆಂದೂ ತಪ್ಪಿದಲ್ಲಿ ಕಟ್ಟಳೆಯನ್ನು ಮೀರಿದಂತಾಗುವುದೆಂದೂ ರೂಪಿಸಿದ ಶಾಸನ ಇದಾಗಿದೆ.

**ಬಿ.ಎಂ.ಶ್ರೀ.**ಯವರು ಸಂಪಾದಿಸಿದ **ಕನ್ನಡ ಬಾವುಟ** ಕೃತಿಯಿಂದ ಈ ಪಾಠಭಾಗವನ್ನು ಆಯ್ದುಕೊಳ್ಳಲಾಗಿದೆ.

## ಪದವಿಂಗಡಣಾ ಓದು

ಮಹಾಬಡವಾಮುಖ + ಅಗ್ನಿ., ಚರಣ + ಅಂಬುಜ., ರಾಮ + ಅನುಜ., ಶ್ರೀಮತ್ + ಮಹಾಮಂಡಳ + ಈಶ್ವರಂ., ಮಾಡಲ್ + ಆಗಿ., ಸಕಳ + ಆಚಾರ್ಯರೂ., ತಿರು + ಪಿಡಿ., ಭೇದ + ಇಲ್ಲ + ಎಂದು., ಕೈ+ಪಿಡಿದುಕೊಟ್ಟು, ದೆಸೆ+ಇಂದ, ಹಾನಿವೃದ್ಧಿ + ಆದರೂ., ಹಾನಿವೃದ್ಧಿ + ಆಗಿ., ರಾಜ್ಯದ+ಒಳಗೆ+ಉಳ್ಳ+ಅಂತಹ, ಚಂದ್ರ + ಅರ್ಕಸ್ಥಾಯಿ + ಆಗಿ., ಭೇದ + ಆಗಿ., ಕಾಣಲ್ + ಆಗದು.,

ಅಂಗರಕ್ಷೆಗೆ + ಓಸುಕ., ರಾಜ್ಯದ + ಒಳಗೆ + ಉಳ್ಳ + ಅಂತಹ., ಬಾಗಿಲು + ಕಟ್ಟಳೆ + ಆಗಿ., ಯಿಪ್ಪತ್ತು + ಆಳನೂ., ಸಂತ+ಇಟ್ಟು., ಜೀರ್ಣಜಿನ + ಆಲಯಂಗಳಿಗೆ., ಸೊದೆಯನ್ + ಇಕ್ಕುವುದು., ಮರಿಯಾದೆ + ಅಲು., ಚಂದ್ರ + ಅರ್ಕರ್ + ಉಳ್ಳ + ಅನ್ನಂ. ತಪ್ಪಲ್ + ಈಯದೆ., ಉಪ + ಆರ್ಜಿಸಿಕೊಂಬುದು., ಆವನ್ + ಒಬ್ಬನು., ಮೀರಿದ + ಅವನು.,

## ಪದ–ಅರ್ಥ

ಪಾಷಂಡ – ಸಂಪ್ರದಾಯ ವಿರೋಧಿಸುವವ, ನಾಸ್ತಿಕ; ಬಡವಾ – ಹೆಣ್ಣುಕುದುರೆ; ಬಡವಾಮುಖಾಗ್ನಿ – ಸಮುದ್ರದೊಳಗೆ ಕುದುರೆಯ ಮುಖದಿಂದ ಹೊರಟ ಬೆಂಕಿ; ಚರಣ – ಪಾದ; ಅಂಬುಜ – ತಾವರೆ; ವಿಜಯತೆ – ಗೆಲುವಾಗಲಿ; ಯತಿ – ಇಂದ್ರಿಯ ನಿಗ್ರಹ ಮಾಡಿದವನು, ಯೋಗಿ; ಕೀಲಕ ಸಂವತ್ಸರ – ಪ್ರಭವಾದಿ ೬೦ ಸಂವತ್ಸರಗಳಲ್ಲೊಂದು. ಶು॥ – ಶುದ್ಧ, ಶುಕ್ಲಪಕ್ಷ; ಬೃ॥ – ಬೃಹಸ್ಪತಿವಾರ; ನಾಡು – ರಾಜ್ಯದ ಒಂದು ಭಾಗ; ಈಶ್ವರ – ಒಡೆಯ; ಭವ್ಯ ಜನಂಗಳ್ – ಜೈನಧರ್ಮೀಯರು; ಬಿನ್ನಹ(ದ್ಭ) – ವಿಜ್ಞಾಪನೆ(ತ್ಸ); ಸಮಯಿ – ಒಂದು ನಿರ್ದಿಷ್ಟ ಸಿದ್ಧಾಂತವನ್ನು ಅನುಸರಿಸುವವನು; ಮೋಷ್ಟಿಕ – ಅಕ್ಕಸಾಲಿ; ಸಕಳ – ಎಲ್ಲ; ತಿರುಪಣಿತಿರುವಿಡಿ ತಣ್ಣೀರವರು – ರಾಟೆ ತಿರುಗಿಸಿ ನೀರು ಹರಿಸುವವರು; ಜಲಗಾರರು; ಸಾವಂತ(ದ್ಭ)–ಸಾಮಂತ(ತ್ಸ); ಬೋವಕ್ಕಳು – ಮಲೆನಾಡು ಪ್ರದೇಶದಲ್ಲಿ ಹೆಚ್ಚಾಗಿ ವಾಸಿಸುವ ಒಂದು ವರ್ಗದ ಜನರು. ತಿರಿಕುಲ – ಅಲೆಮಾರಿಗಳು; ಜಾಂಬವಕುಲ – ಕರಡಿಗುರುತಿನ ಧ್ವಜವುಳ್ಳ ದೊರೆಯ ಕುಲದವರು, ಆಜಾನು ಬಾಹುಗಳು; ಬಸ್ತಿ – ಬಸದಿ; ಶಾಸನವ ನಡು – ಅಪ್ಪಣೆ ಮಾಡು; ಚಂದ್ರಾರ್ಕಸ್ಥಾಯಿ – ಸೂರ್ಯಚಂದ್ರರು ಇರುವ ತನಕ ಸ್ಥಿರವಾಗಿರು; ಬಹೆವು – ಬರುತ್ತೇವೆ; ಅನುಮತ – ಸಮ್ಮತಿ; ಕಟ್ಟಳೆ – ನಿಯಮ; ಸೊದೆ(ದ್ಭ) – ಸುಧೆ(ತ್ಸ) – ಅಮೃತ; ಸೊದೆಯ ನಿಕ್ಕುವುದು – ಜೀರ್ಣೋದ್ಧಾರ ಮಾಡುವುದು; ಉಪಾರ್ಜಿಸು – ಸಂಪಾದಿಸು; ಗ್ರಾಮಿಣಿ – ಹಳ್ಳಿಯ ಮುಖ್ಯಸ್ಥ; ತಡಿ(ದ್ಭ) ತಟ(ತ್ಸ) – ದಡ; ಹೋಹರು – ಹೋಗುತ್ತಾರೆ.



## ಪಠ್ಯಾಧಾರ ಟಿಪ್ಪಣಿ

**ಬಡವಾಮುಖಾಗ್ನಿ :** ಸಮುದ್ರದೊಳಗೆ ಕುದುರೆಯ ಮುಖದಿಂದ ಹೊರಟ ಬೆಂಕಿ. ಉರ್ವ ಎಂಬ ಋಷಿಯು ಅಯೋನಿಜ ಪುತ್ರನನ್ನು ಪಡೆಯಲಪೇಕ್ಷಿಸಿ ಒಂದು ದರ್ಭೆಯ ಹುಲ್ಲಿನಿಂದ ತನ್ನ ತೊಡೆಯನ್ನು ಮಥಿಸಿಕೊಂಡನು. ಆಗ ಜ್ವಾಲಾಮಾಲೆಯಿಂದ ಕೂಡಿದ ಓರ್ವಪುತ್ರನು ಜನಿಸಿ ತನ್ನ ಜ್ವಾಲೆಯಿಂದ ಲೋಕವನ್ನು ದಹಿಸಲಾರಂಭಿಸಿದನು. ಈ ಅನಾಹುತವನ್ನು ತಪ್ಪಿಸಲು ಬ್ರಹ್ಮನು ಅವನಿಗೆ ಸಮುದ್ರದಲ್ಲಿ ಬಡವಾಮುಖವನ್ನು ಸ್ಥಾನವಾಗಿ ಕಲ್ಪಿಸಿ ಜಗತ್ತನ್ನು ರಕ್ಷಿಸಿದನು. ಅಂದಿನಿಂದ ಆ ಅಗ್ನಿಗೆ ಬಡವಾಮುಖಾಗ್ನಿ ಎಂದು ಹೆಸರಾಯಿತು.

**ಕೀಲಕ ಸಂವತ್ಸರ :** ಭಾರತೀಯ ಕಾಲಗಣನೆಯ ಪ್ರಕಾರ ವರ್ಷಗಳನ್ನು ಸಂವತ್ಸರಗಳೆಂದು ಕರೆಯುತ್ತಾರೆ. ಬೇರೆ ಬೇರೆ ಹೆಸರುಗಳನ್ನು ಹೊಂದಿದ್ದ ಇಂತಹ ಅರುವತ್ತು ಸಂವತ್ಸರಗಳಿದ್ದು ಆ ಪಟ್ಟಿಯಲ್ಲಿ ಇದು ನಲ್ವತ್ತೆರಡನೆಯದು. ಚಾಂದ್ರಯುಗಾದಿಯಿಂದ (ಚೈತ್ರಮಾಸದ ಮೊದಲದಿನ) ಹೊಸ ಸಂವತ್ಸರ ಆರಂಭವಾಗುತ್ತದೆ.

# ೬೦ ಸಂವತ್ಸರಗಳು

| | | |
|---|---|---|
| ೧. ಪ್ರಭವ | ೨೧. ಸರ್ವಜಿತು | ೪೧. ಪ್ಲವಂಗ |
| ೨. ವಿಭವ | ೨೨. ಸರ್ವಧಾರಿ | ೪೨. ಕೀಲಕ |
| ೩. ಶುಕ್ಲ | ೨೩. ವಿರೋಧಿ | ೪೩. ಸೌಮ್ಯ |
| ೪. ಪ್ರಮೋದೂತ | ೨೪. ವಿಕೃತಿ | ೪೪. ಸಾಧಾರಣ |
| ೫. ಪ್ರಜೋತ್ಪತ್ತಿ | ೨೫. ಖರ | ೪೫. ವಿರೋಧಿಕೃತು |
| ೬. ಆಂಗೀರಸ | ೨೬. ನಂದನ | ೪೬. ಪರಿಧಾವಿ |
| ೭. ಶ್ರೀಮುಖ | ೨೭. ವಿಜಯ | ೪೭. ಪ್ರಮಾದೀ |
| ೮. ಭಾವ | ೨೮. ಜಯ | ೪೮. ಆನಂದ |
| ೯. ಯುವ | ೨೯. ಮನ್ಮಥ | ೪೯. ರಾಕ್ಷಸ |
| ೧೦. ಧಾತು | ೩೦. ದುರ್ಮುಖ | ೫೦. ನಳ |
| ೧೧. ಈಶ್ವರ | ೩೧. ಹೇವಿಳಂಬಿ | ೫೧. ಪೈಂಗಳ (ಪಿಂಗಳ) |
| ೧೨.ಬಹುಧಾನ್ಯ | ೩೨. ವಿಳಂಬಿ | ೫೨. ಕಾಳಯುಕ್ತಿ |
| ೧೩. ಪ್ರಮಾಧಿ | ೩೩. ವಿಕಾರಿ | ೫೩. ಸಿದ್ಧಾರ್ಥಿ |
| ೧೪. ವಿಕ್ರಮ | ೩೪. ಶಾರ್ವರಿ | ೫೪. ರೌದ್ರಿ |
| ೧೫. ವೃಷ (ವಿಷು) | ೩೫. ಪ್ಲವ | ೫೫. ದುರ್ಮತಿ |
| ೧೬. ಚಿತ್ರಭಾನು | ೩೬. ಶುಭಕೃತು | ೫೬. ದುಂದುಭಿ |
| ೧೭. ಸ್ವಭಾನು | ೩೭. ಶೋಭಕೃತು | ೫೭. ರುಧಿರೋದ್ಗಾರಿ |
| ೧೮. ತಾರಣ | ೩೮. ಕ್ರೋಧಿ | ೫೮. ರಕ್ತಾಕ್ಷಿ |
| ೧೯. ಪಾರ್ಥಿವ | ೩೯. ವಿಶ್ವಾವಸು | ೫೯. ಕ್ರೋಧನ |
| ೨೦. ವ್ಯಯ | ೪೦. ಪರಾಭವ | ೬೦. ಅಕ್ಷಯ (ಕ್ಷಯ) |



- **ಶು॥ :** ನಮ್ಮ ಪಂಚಾಂಗಗಳಲ್ಲಿ ಕೆಲವು ಸೂಚನೆಗಳನ್ನು ಸಂಕೇತಾಕ್ಷರಗಳ ಮೂಲಕ ತಿಳಿಸಲಾಗುತ್ತದೆ. ಒಂದು ಚಾಂದ್ರಮಾಸದ ಪ್ರತಿಪದೆ (ಪಾಡ್ಯ) ಯಿಂದ ಹುಣ್ಣಿಮೆಯವರೆಗಿನ ಹದಿನೈದು ದಿನಗಳನ್ನು **ಶುಕ್ಲಪಕ್ಷ** ಅಥವಾ **ಶುದ್ಧಪಕ್ಷ**ವೆಂದು ಕರೆಯುತ್ತಾರೆ. ಅಂತೆಯೆ ಹುಣ್ಣಿಮೆಯ ಮರುದಿನದಿಂದ ಅಮಾವಾಸ್ಯೆಯವರೆಗಿನ ೧೫ ದಿನಗಳನ್ನು **ಕೃಷ್ಣಪಕ್ಷ** ಅಥವಾ **ಬಹುಳಪಕ್ಷ** ವೆಂದು ಕರೆಯುತ್ತಾರೆ. ಸಂಕೇತವಾಗಿ ಶುಕ್ಲಪಕ್ಷಕ್ಕೆ **ಶು॥** ಎಂತಲೂ ಬಹುಳ ಅಥವಾ ಕೃಷ್ಣ ಪಕ್ಷಕ್ಕೆ **ಬ॥** ಅಥವಾ **ಕೃಷ್ಣ** ॥ ಎಂದೂ ಸೂಚ್ಯವಾಗಿ ಬಳಸುತ್ತಾರೆ.

- ಬೃ॥ : – ಬೃಹಸ್ಪತಿವಾರ, ಅಥವಾ ಗುರುವಾರ
  - ವಾರದ ಏಳು ದಿನಗಳಿಗೆ ಬೇರೆ ಬೇರೆ ಹೆಸರುಗಳಿವೆ. ಅವುಗಳಿಗೆ ಸಂಕೇತಗಳನ್ನು ಬಳಸುತ್ತಾರೆ.
  - ಭಾನುವಾರಕ್ಕೆ ರವಿವಾರ. 'ರ'
  - ಸೋಮವಾರಕ್ಕೆ ಚಂದ್ರವಾರ. 'ಚ'
  - ಮಂಗಳವಾರಕ್ಕೆ ಕುಜವಾರ 'ಕು'
  - ಬುಧವಾರಕ್ಕೆ ಸೌಮ್ಯವಾರ 'ಸೌ'
  - ಗುರುವಾರಕ್ಕೆ ಬೃಹಸ್ಪತಿವಾರ 'ಬೃ'
  - ಶುಕ್ರವಾರಕ್ಕೆ ಭೃಗುವಾರ 'ಭೃ'
  - ಶನಿವಾರಕ್ಕೆ ಸ್ಥಿರವಾರ 'ಸ್ಥಿ'

ಕೆಲವು ವಾರಗಳಿಗೆ ಸಾಂದರ್ಭಿಕವಾಗಿ ಬೇರೆ ಹೆಸರುಗಳನ್ನು ಬಳಸುವುದಿದೆ.

ಉದಾ:

| | | |
|---|---|---|
| ಭಾನುವಾರ | – | ಆದಿತ್ಯವಾರ |
| ಸೋಮವಾರ | – | ಇಂದುವಾರ |
| ಮಂಗಳವಾರ | – | ಭೌಮವಾರ |
| ಶುಕ್ರ | – | ಭಾರ್ಗವವಾರ |
| ಶನಿ | – | ಮಂದವಾರ |

**ಪಂಚಮಹಾವಾದ್ಯಗಳು :** ತಾಳ, ಹಳಗ, ಗಂಟೆ, ಮೌರಿ, ಸನಾದಿ.



## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ :**

೧. ಬುಕ್ಕರಾಯನ ಹಿರಿಮೆ ಏನು?

೨. ಬುಕ್ಕರಾಯನ ರಾಜ್ಯಭಾರ ಕಾಲದಲ್ಲಿ ಯಾರೊಳಗೆ ಸಂವಾದ ನಡೆಯಿತು?

೩. ನಾಡ ಭವ್ಯ ಜನರು ಬುಕ್ಕರಾಯನ ಬಳಿ ಏನೆಂದು ಬಿನ್ನಹ ಮಾಡಿದರು?

೪. ಶ್ರೀವೈಷ್ಣವರೊಡನೆ ಮಹಾರಾಜನು ಏನು ಹೇಳಿದನು?

೫. ರಾಯನು ವಿಧಿಸಿದ ಕಟ್ಟಳೆಯನ್ನು ಮೀರಿದರೆ ಆಗುವ ಪರಿಣಾಮವೇನು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರಿಸಿ :**

೧. 'ಧರ್ಮಸಮದೃಷ್ಟಿ' ಪಾಠದಲ್ಲಿ ರಾಮಾನುಚಾರ್ಯರ ಗುಣವಿಶೇಷತೆಯನ್ನು ಹೇಗೆ ಕೊಂಡಾಡಲಾಗಿದೆ?

೨. ಬುಕ್ಕರಾಯನು ನಡೆಸಿದ ಧರ್ಮಸಭೆಗೆ ಯಾರನ್ನೆಲ್ಲ ಆಹ್ವಾನಿಸಿದನು?

೩. ಜೈನಧರ್ಮದ ರಕ್ಷಣೆಗಾಗಿ ಬುಕ್ಕರಾಯನು ಕೈಗೊಂಡ ಕ್ರಮಗಳೇನು?

**ಇ. ಎಂಟು ಹತ್ತು ವಾಕ್ಯಗಳಲ್ಲಿ ಉತ್ತರಿಸಿ :**

ಬುಕ್ಕರಾಯನು ತನ್ನ ಆಳ್ವಿಕೆಯಲ್ಲಿ ಧರ್ಮಸಮದೃಷ್ಟಿಯನ್ನು ಹೇಗೆ ಆಚರಣೆಗೆ ತಂದನು?

**ಈ. ಸಂದರ್ಭದೊಂದಿಗೆ ಸ್ವಾರಸ್ಯವಿವರಿಸಿ :**

೧. "ಪಾಷಂಡ ಸಾಗರ ಮಹಾಬಡವಾಮುಖಾಗ್ನಿಃ"

೨. "ಎಲ್ಲಾ ರಾಜ್ಯದೊಳಗುಳ್ಳಂತಹ ಬಸ್ತಿಗಳಿಗೆ ಶ್ರೀವೈಷ್ಣವರು ಶಾಸನವ ನಟ್ಟು ಪಾಲಿಸುವರು"

೩. "ಮಿಕ್ಕ ಹೊನ್ನಿಂಗೆ ಜೀರ್ಣಜಿನಾಲಯಂಗಳಿಗೆ ಸೊದೆಯನಿಕ್ಕುವುದು."

೪. "ಈ ಮಾಡಿದ ಕಟ್ಟಳೆಯನು ಆವನೊಬ್ಬನು ಮೀಜಿದವನು ರಾಜದ್ರೋಹಿಯಪ್ಪನು."

**ಉ. ಬಿಟ್ಟಿರುವ ಸ್ಥಳಗಳಲ್ಲಿ ಸೂಕ್ತ ಪದವನ್ನು ತುಂಬಿ.**

೧. ರಾಮಾನುಜೋ ____________ ಯತಿರಾಜರಾಜಃ.

೨. ಜೈನದರ್ಶನಕ್ಕೆ ಪೂರ್ವಮರ್ಯಾದೆಯಲು ____________ ಕಳಶವೂ ಸಲುವುದು.

೩. ವೈಷ್ಣವರೂ ಜೈನರೂ ಒಂದು ____________ ಕಾಣಲಾಗದು.



## ಸೈದ್ಧಾಂತಿಕ ಭಾಷಾಭ್ಯಾಸ

### ಲೇಖನ ಚಿಹ್ನೆ

ಬರೆವಣಿಗೆಯಲ್ಲಿ ಲೇಖನಚಿಹ್ನೆಗಳ ಪಾತ್ರ ಅತ್ಯಂತ ಮುಖ್ಯವಾದುದು. ಲೇಖನ ಚಿಹ್ನೆಗಳಿಲ್ಲದ ಬರೆವಣಿಗೆ ಸ್ಪಷ್ಟಾರ್ಥವನ್ನು ಕೊಡದೆ ತೊಡಕುಗಳಿಗೆ ಕಾರಣವಾಗುವುದುಂಟು. ಹಾಗಾಗಿ ಲೇಖನ ಚಿಹ್ನೆಗಳು ಅತ್ಯಂತ ಅಗತ್ಯ. ಇಲ್ಲಿ ಕೊಟ್ಟಿರುವ ವಿವರಗಳನ್ನು ಗಮನಿಸಿ.

**ಪೂರ್ಣ ವಿರಾಮ :– (.)** ಒಂದು ಪೂರ್ಣಕ್ರಿಯೆಯಿಂದ ಕೂಡಿದ ವಾಕ್ಯದ ಕೊನೆಯಲ್ಲಿ ಈ ಪೂರ್ಣವಿರಾಮ ಚಿಹ್ನೆಯನ್ನು ಬಳಸಬೇಕು.

**ಅರ್ಧ ವಿರಾಮ :– (;)** ಅನೇಕ ಉಪವಾಕ್ಯಗಳು ಒಂದು ಪ್ರಧಾನವಾಕ್ಯಕ್ಕೆ ಅಧೀನವಾಗಿದ್ದಾಗ ಉಪವಾಕ್ಯಗಳು ಮುಗಿದಾಗಲೆಲ್ಲ ಈ ಚಿಹ್ನೆಯನ್ನು ಬಳಸಲಾಗುವುದು.

**ಉದಾ :–** ತಾವು ಕಡಿಮೆ ಮಾತನಾಡಿದ್ದೀರಿ; ಹೆಚ್ಚು ಕೆಲಸ ಮಾಡಿದ್ದೀರಿ.

**ಅಲ್ಪವಿರಾಮ :– (,)** ಸಂಬೋಧನೆಯ ಮುಂದೆ ಹಾಗೂ ಕರ್ತೃ, ಕರ್ಮ, ಕ್ರಿಯಾಪದಗಳಿಗೆ ಬೇರೆ ಬೇರೆ ವಿಶೇಷಣಗಳು ಬರುವಾಗ ಕೊನೆಯ ವಿಶೇಷಣ ಬಿಟ್ಟು ಉಳಿದವುಗಳ ಮುಂದೆ ಅಲ್ಪವಿರಾಮ ಬಳಸಬೇಕು.
**ಉದಾ :–** ಬಟ್ಟೆಗಿರಣಿ, ರಟ್ಟು, ಪೆನ್ಸಿಲ್, ಬೆಂಕಿಕಡ್ಡಿ ತಯಾರಿಕಾ ಘಟಕಗಳನ್ನು ಸ್ಥಾಪಿಸಲಾಗಿದೆ.

**ಪ್ರಶ್ನಾರ್ಥಕ :–** (?) ಪ್ರಶ್ನರೂಪದ ಪದ ಮತ್ತು ವಾಕ್ಯಗಳ ಮುಂದೆ ಪ್ರಶ್ನಾರ್ಥಕ ಚಿಹ್ನೆಯನ್ನು ಬಳಸಲಾಗುವುದು.

**ಭಾವಸೂಚಕ :–** (!) ಹರ್ಷ, ಆಶ್ಚರ್ಯ, ಸಂತೋಷ, ವಿಷಾದ, ದುಃಖ ಮುಂತಾದ ಭಾವನೆಗಳನ್ನು ಸೂಚಿಸುವ ಪದಗಳ ಮುಂದೆ ಈ ಚಿಹ್ನೆಯನ್ನು ಬಳಸಲಾಗುವುದು.
**ಉದಾ :–** ಅಯ್ಯೋ! ಹೀಗಾಗ ಬಾರದಿತ್ತು!

**ಉದ್ಧರಣ ಚಿಹ್ನೆ :–** (" ") ಒಬ್ಬರು ಹೇಳಿದ ಮಾತನ್ನೇ ಯಥಾವತ್ತಾಗಿ ಬರೆಯುವಾಗ ಈ ಚಿಹ್ನೆಯನ್ನು ಬಳಸಲಾಗುವುದು.
**ಉದಾ :–** "ಶಿಕ್ಷಣವು ಕೆಲವೇ ಜನರ ಸ್ವತ್ತಾಗದೆ ಪ್ರಗತಿಪರ ರಾಜ್ಯದಲ್ಲಿ ಎಲ್ಲರ ಆಜನ್ಮಸಿದ್ಧ ಹಕ್ಕಾಗಬೇಕು" ಎಂದು ಸರ್.ಎಂ. ವಿಶ್ವೇಶ್ವರಯ್ಯನವರು ಹೇಳಿದರು.

**ವಾಕ್ಯವೇಷ್ಟನ ಚಿಹ್ನೆ :–** (' ') ಪಾರಿಭಾಷಿಕ ಪದಗಳನ್ನು ಬಳಸುವಾಗ, ಅನ್ಯಭಾಷೆಯ ಪದಗಳನ್ನು ಬಳಸುವಾಗ ಈ ಚಿಹ್ನೆಯನ್ನು ಬಳಸಲಾಗುವುದು.
**ಉದಾ :–** ಕನ್ನಡಭಾಷೆಯಲ್ಲಿ 'ಇಂಗ್ಲಿಷ್', 'ಪರ್ಷಿಯನ್', 'ಪೋರ್ಚ್‌ಗೀಸ್' ಭಾಷೆಗಳ ಪದಗಳನ್ನು ಬಳಸಲಾಗುತ್ತದೆ.

**ಆವರಣ ಚಿಹ್ನೆ :–** ( ) ಒಂದು ಪದವನ್ನೋ ವಾಕ್ಯವನ್ನೋ ಹೇಳಿ ಅದಕ್ಕೆ ಸಮಾನಾರ್ಥಕ ಪದವನ್ನೋ ವಾಕ್ಯವನ್ನೋ ಹೇಳುವಾಗ ಈ ಚಿಹ್ನೆಯನ್ನು ಬಳಸಲಾಗುತ್ತದೆ.
**ಉದಾ :–** ನೀರನ್ನು ವಿಭಜಿಸಿದರೆ ಆಮ್ಲಜನಕ (ಆಕ್ಸಿಜನ್) ಜಲಜನಕ (ಹೈಡ್ರೋಜನ್)ಗಳು ಉತ್ಪತ್ತಿಯಾಗುತ್ತವೆ.

**ವಿವರಣಾತ್ಮಕ ಚಿಹ್ನೆ :–** (:–) ಒಂದು ಅಭಿಪ್ರಾಯದ ವಿವರಣೆ ಮುಂದೆ ತಿಳಿಸಿದಂತೆ ಇದೆ ಎಂದು ತೋರಿಸುವ ಸಂದರ್ಭದಲ್ಲಿ ಈ ಚಿಹ್ನೆಯನ್ನು ಬಳಸಲಾಗುತ್ತದೆ.

## ವಾಕ್ಯರಚನೆ

**ಇಲ್ಲಿರುವ ವಾಕ್ಯಗಳನ್ನು ಗಮನಿಸಿ :**

೧. ಭೀಮನು ದುಷ್ಟನಾದ ಬಕನನ್ನು ಕೊಂದನು.

೨. ಮಹಾಶಕ್ತನಾದ ದೇವರು ಸಮಸ್ತಲೋಕಗಳನ್ನು ಪ್ರೀತಿಯಿಂದ ಕಾಪಾಡುವನು.

ಈ ಎರಡು ವಾಕ್ಯಗಳಲ್ಲಿ **ಭೀಮ, ದೇವರು** ಎಂಬ ಪದಗಳು ಕರ್ತೃಪದಗಳು, **ಸಮಸ್ತಲೋಕ, ಬಕ** ಎಂಬ ಪದಗಳು ಕರ್ಮಪದಗಳು, **ಕಾಪಾಡುವನು, ಕೊಂದನು** ಎಂಬ ಪದಗಳು ಕ್ರಿಯಾಪದಗಳು ಹೀಗೆ ________

**ಕರ್ತೃ, ಕರ್ಮ ಮತ್ತು ಕ್ರಿಯಾಪದಗಳಿಂದ ಕೂಡಿರುವ ಪದ ಸಮೂಹವೇ ವಾಕ್ಯ ಎಂದೆನಿಸುವುದು.**

ಆದರೆ ಕೆಲವೊಮ್ಮೆ ಕರ್ತೃ, ಕರ್ಮ, ಕ್ರಿಯಾಪದಗಳಿಗೆ ವಿಶೇಷಣಗಳೂ ಸೇರಿಕೊಂಡು ವಾಕ್ಯರಚನೆಯಾಗುವುದುಂಟು. ಹಾಗೆಯೇ ಕರ್ತೃಪದ ಅಥವಾ ಕರ್ಮಪದ ಅಥವಾ ಕ್ರಿಯಾಪದಗಳು ಇಲ್ಲದೆಯೂ ವಾಕ್ಯ ಪೂರ್ಣ ಅರ್ಥವನ್ನು ಕೊಡುವುದರಿಂದ ಅಂತಹ ಪ್ರಯೋಗವೂ ಇದೆ.

ಉದಾ:– ೧. ಈಗ ಬಂದನು (ಕರ್ತೃ ಪದ ಇಲ್ಲ)

೨. ಅವನು ಈಗತಾನೆ ತಿಂದನು (ಕರ್ಮಪದ ಇಲ್ಲ)

೩. ಹುಡುಗ ಬುದ್ಧಿವಂತ (ಕ್ರಿಯಾಪದ ಇಲ್ಲ)

ಇಂತಹ ವಾಕ್ಯಗಳನ್ನು **ಅಧ್ಯಾಹಾರಯುಕ್ತ** ವಾಕ್ಯಗಳು ಎಂದು ಕರೆಯಲಾಗಿದೆ.

## ವಾಕ್ಯಪ್ರಕಾರಗಳು

**೧. ಸಾಮಾನ್ಯ ವಾಕ್ಯ**

ಈವಾಕ್ಯಗಳನ್ನು ಗಮನಿಸಿ.

ಅ. ಕಾರವಾರದಲ್ಲಿ ಮಲೇರಿಯಾ ವ್ಯಾಪಕವಾಗಿ ಹಬ್ಬಿತ್ತು.

ಆ. ಕಾರವಾರದಲ್ಲಿ ಉದ್ಯೋಗಿಯಾಗಿದ್ದ ವೀರೇಶ್ವರ ಪಾಠಕ್ ಮಲೇರಿಯಾದಿಂದ ಬಳಲಿದರು.

ಇ. ವೀರೇಶ್ವರ ಪಾಠಕ್‌ರನ್ನು ಬೆಂಗಳೂರಿಗೆ ವರ್ಗಾವಣೆ ಮಾಡಲಾಯಿತು.

ಈ ಮೂರು ವಾಕ್ಯಗಳು ಒಂದೊಂದು ಪೂರ್ಣಕ್ರಿಯಾಪದದೊಡನೆ ಸ್ವತಂತ್ರ ವಾಕ್ಯಗಳಾಗಿವೆ. ಹೀಗೆ—

**ಒಂದು ಪೂರ್ಣಕ್ರಿಯಾಪದದೊಂದಿಗೆ ಸ್ವತಂತ್ರವಾಗಿರುವ ವಾಕ್ಯವನ್ನು ಸಾಮಾನ್ಯ ವಾಕ್ಯವೆಂದು ಕರೆಯುತ್ತಾರೆ.**

ಸಾಮಾನ್ಯವಾಕ್ಯದಲ್ಲಿ ಒಂದು ಕ್ರಿಯಾಪದ ಮಾತ್ರ ಇದ್ದು ಸಾಪೇಕ್ಷ ಕ್ರಿಯಾರೂಪಗಳು ಮಧ್ಯದಲ್ಲಿ ಬರಬಹುದು.

**ಉದಾ:–** ಕಾರವಾರದಲ್ಲಿ ಮಲೇರಿಯಾ ಹಬ್ಬಿ, ವೀರೇಶ್ವರ ಪಾಠಕ್‌ರವರ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರಿ, ಅವರು ಅಲ್ಲಿಂದ ವರ್ಗಾವಣೆ ಹೊಂದುವಂತೆ ಆಯಿತು.

ಈ ವಾಕ್ಯದಲ್ಲಿ **ಆಯಿತು** ಎಂಬ ಒಂದೇ ಕ್ರಿಯಾಪದವಿದ್ದು **ಹಬ್ಬಿ, ಬೀರಿ** ಎಂಬ ಸಾಪೇಕ್ಷ ಕ್ರಿಯಾಪದಗಳು ಮಧ್ಯದಲ್ಲಿ ಬಂದಿವೆ. ಹಾಗಾಗಿ ಇದು ಕೂಡಾ **ಸಾಮಾನ್ಯವಾಕ್ಯ**ವೆಂದೇ ಪರಿಗಣಿಸಲ್ಪಡುತ್ತದೆ.



**೨. ಸಂಯೋಜಿತ ವಾಕ್ಯ :**

ಕಾರವಾರದಲ್ಲಿ ಮಲೇರಿಯಾ ಹಬ್ಬಿತ್ತು; ಆದ್ದರಿಂದ ವೀರೇಶ್ವರ ಪಾಠಕ್‌ರವರು ಮಲೇರಿಯಾದಿಂದ ಬಳಲಬೇಕಾಯ್ತು; ಈ ಕಾರಣದಿಂದ ಅವರನ್ನು ಅಲ್ಲಿಂದ ವರ್ಗಾಯಿಸಲಾಯ್ತು.

ಈ ವಾಕ್ಯ ಸಮೂಹದಲ್ಲಿ ಮೂರು ಬೇರೆಬೇರೆ ವಾಕ್ಯಗಳಿವೆ. ಆದರೆ ಈ ವಾಕ್ಯಗಳು ಒಂದಕ್ಕೊಂದು ಸಂಯೋಜನೆಗೊಂಡು ಒಂದು ಪೂರ್ಣವಾಕ್ಯವಾಗಿದೆ. ಹೀಗೆ–

**ಸ್ವತಂತ್ರ ವಾಕ್ಯಗಳಾಗಿ ನಿಲ್ಲಬಲ್ಲ ಅನೇಕ ಉಪವಾಕ್ಯಗಳೊಡನೆ ಒಂದು ಪೂರ್ಣಾಭಿಪ್ರಾಯದ ವಾಕ್ಯವಾಗಿದ್ದರೆ ಅದು ಸಂಯೋಜಿತ ವಾಕ್ಯವೆನ್ನಿಸುವುದು.**

**೩. ಮಿಶ್ರವಾಕ್ಯ :**

ಏನಾದರೂ ಮಾಡಿ ಭಾರತದಲ್ಲಿ ಮೋಟಾರು ಕಾರ್ಖಾನೆಯನ್ನು ಸ್ಥಾಪಿಸಲು ವಿಶ್ವೇಶ್ವರಯ್ಯನವರು ನಿರ್ಧರಿಸಿದರಾದರೂ ಅವರ ನಿರ್ಧಾರಕ್ಕೆ ಬ್ರಿಟಿಷ್ ಸರಕಾರದ ಅಪ್ಪಣೆ ದೊರೆಯಲಿಲ್ಲವೆಂಬ ವಿಷಯ ತಿಳಿದಾಗ ಅವರು ಬಹುವಾಗಿ ಮರುಗಿದರು.

ಇಲ್ಲಿ **ಅವರು ಬಹುವಾಗಿ ಮರುಗಿದರು** ಎಂಬ ಪ್ರಧಾನ ವಾಕ್ಯಕ್ಕೆ ೧– ಏನಾದರೂ ಮಾಡಿ ಭಾರತದಲ್ಲಿ ಮೋಟಾರು ಕಾರ್ಖಾನೆಯನ್ನು ಸ್ಥಾಪಿಸಲು ವಿಶ್ವೇಶ್ವರಯ್ಯನವರು ನಿರ್ಧರಿಸಿದರು; ೨– ಅವರ ನಿರ್ಧಾರಕ್ಕೆ ಬ್ರಿಟಿಷ್ ಸರಕಾರದ ಅಪ್ಪಣೆ ದೊರೆಯಲಿಲ್ಲ ಎಂಬ ವಾಕ್ಯಗಳು ಉಪವಾಕ್ಯಗಳಾಗಿ ಸೇರಿಕೊಂಡಿವೆ. ಹೀಗೆ—

**ಒಂದು ಅಥವಾ ಅನೇಕ ವಾಕ್ಯಗಳು ಒಂದು ಪ್ರಧಾನ ವಾಕ್ಯಕ್ಕೆ ಅಧೀನಗಳಾಗಿದ್ದರೆ ಅಂಥ ವಾಕ್ಯವನ್ನು ಮಿಶ್ರವಾಕ್ಯ ಎನ್ನುತ್ತೇವೆ.**

## ವ್ಯಾವಹಾರಿಕ ಪತ್ರ

ಪರಿಷತ್ತು ಪ್ರಕಟಿಸಿದ **'ಕನ್ನಡ ನಿಘಂಟು'** ಇದರ ಹತ್ತು ಪ್ರತಿಗಳನ್ನು ಕಳುಹಿಸಿಕೊಡುವಂತೆ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ಪತ್ರವ್ಯವಹಾರ ನಡೆಸಿ.

ಅಶೋಕನಗರ,
೦೪–೦೯–೨೦೧೩.

ಪ್ರಮೀಳ,
ಹತ್ತನೆಯ ತರಗತಿ
ಸರಕಾರಿ ಪ್ರೌಢಶಾಲೆ
ಅಶೋಕನಗರ
ಶಿವಮೊಗ್ಗ – ಇವರು

ಮಾನ್ಯ ಕಾರ್ಯದರ್ಶಿಗಳು,
ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜ ಪೇಟೆ
ಬೆಂಗಳೂರು. – ಇವರಿಗೆ ಬರೆದ ಪತ್ರ.

ಮಾನ್ಯರೇ,

ವಿಷಯ : ಪರಿಷತ್ತಿನ ಪ್ರಕಟಣೆಯಾದ **'ಕನ್ನಡ ನಿಘಂಟಿನ'** ಹತ್ತು ಪ್ರತಿಗಳನ್ನು ಕಳುಹಿಸಿ ಕೊಡುವ ಬಗ್ಗೆ.

ಪರಿಷತ್ತು ಪ್ರಕಟಿಸಿರುವ ಕನ್ನಡ ನಿಘಂಟಿನ ಹತ್ತು ಪ್ರತಿಗಳು ನನಗೆ ಮತ್ತು ನನ್ನ ಗೆಳತಿಯರಿಗೆ ಬೇಕಾಗಿದೆ. ದಯಮಾಡಿ ಹತ್ತು ಪ್ರತಿಗಳನ್ನು ನನ್ನ ವಿಳಾಸಕ್ಕೆ ವಿ.ಪಿ.ಪಿ. ಮಾಡಬೇಕಾಗಿ ಈ ಮೂಲಕ ಕೇಳಿ ಕೊಳ್ಳುತ್ತೇನೆ. ಆ ಬಗ್ಗೆ ಐನೂರು ರೂಪಾಯಿಗಳ ಬ್ಯಾಂಕ್ ಹುಂಡಿಯನ್ನು ಮುಂಗಡರೂಪವಾಗಿ ಈ ಪತ್ರದ ಜೊತೆ ಇರಿಸಿದ್ದೇನೆ.

ಇತಿ ತಮ್ಮ ನಂಬುಗೆಯ,
ಸಹಿ......................
(ಪ್ರಮೀಳ)

ಇವರಿಗೆ____

ಮಾನ್ಯ ಕಾರ್ಯದರ್ಶಿಗಳು
ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿ ರಸ್ತೆ
ಚಾಮರಾಜಪೇಟೆ
ಬೆಂಗಳೂರು.

## ಭಾಷಾ ಚಟುವಟಿಕೆ

**೧. ಕೊಟ್ಟಿರುವ ಪದಗಳ ತತ್ಸಮ-ತದ್ಭವ ಬರೆಯಿರಿ.**

ವರ್ಷ, ಶ್ರೀ, ರಾಯ, ವೀರ, ಭಕ್ತ, ಬಿನ್ನಹ, ದೆಸೆ, ಚಂದ್ರ, ಸೊದೆ.

**೨. ಸ್ವಂತ ವಾಕ್ಯಗಳಲ್ಲಿ ಬಳಸಿ.**

ಸಂವಾದ, ಸಮಸ್ತ, ಭೇದವಿಲ್ಲ, ಕೈಹಿಡಿ.

**೩. ನೀಡಿರುವ ಪದಗಳನ್ನು ವಿಂಗಡಿಸಿ ಸಂಧಿಯನ್ನು ಹೆಸರಿಸಿ.**

ಮಂಡಳೇಶ್ವರ, ಸಕಳಾಚಾರ್ಯ, ಭೇದವಿಲ್ಲ, ಕೈವಿಡಿದು, ವೃದ್ಧಿಯಾಗಿ, ಭೇದವಾಗಿ, ಕಾಣಲಾಗದು, ಜಿನಾಲಯ, ತಪ್ಪಲೀಯದೆ, ಚಂದ್ರಾರ್ಕ, ಶ್ರೀಮನ್ಮಹಾ.



## ಹೆಚ್ಚಿನ ಓದು

ನೀವು ಪ್ರೇಕ್ಷಣೀಯ ಸ್ಥಳಗಳಿಗೆ ಪ್ರವಾಸಕ್ಕೆ ಹೋದಾಗ ಅಲ್ಲಿ ಇರಬಹುದಾದ ಪ್ರಾಚೀನ ಶಾಸನಗಳ ಕುರಿತ ಮಾಹಿತಿಯನ್ನು ಕೇಳಿ ಸಂಗ್ರಹಿಸಿ.

* * * * *

# ಗದ್ಯಪಾಠ – ೦೫

# ಭಾಗ್ಯಶಿಲ್ಪಿ ಸರ್ ಎಂ. ವಿಶ್ವೇಶ್ವರಯ್ಯ

– ಡಿ. ಎಸ್. ಜಯಪ್ಪಗೌಡ

**ಮುನ್ನಯಾರಿ :** ಹುಟ್ಟಿದವರೆಲ್ಲರಿಗೂ ಸಾಧಕರಾಗುವುದಕ್ಕೆ ಅವಕಾಶವಿದ್ದರೂ ಎಲ್ಲರೂ ಸಾಧಕರಾಗುವುದಿಲ್ಲ. ಸಾಧಕರಾಗುವುದಕ್ಕೆ ಅಪಾರವಾದ ಸಾಮಾಜಿಕ ಹೊಣೆಗಾರಿಕೆ, ಪರಿಶ್ರಮ, ಭವಿಷ್ಯತ್‌ಚಿಂತನೆ, ಛಲವಂತಿಕೆ ಬೇಕಾಗುತ್ತದೆ. ಸಾಧನೆಯ ಪಥದಲ್ಲಿ ಎದುರಾಗುವ ಅಡ್ಡಿಆತಂಕಗಳನ್ನು ನಿವಾರಿಸಿಕೊಳ್ಳಬೇಕು. ಇಂತಹ ಅಪರೂಪದ ಸಾಧಕರನ್ನು ಸಮಾಜ ನಿತ್ಯ ಸ್ಮರಿಸುತ್ತದೆ. ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆಡಳಿತಾತ್ಮಕವಾಗಿ, ವೈಜ್ಞಾನಿಕವಾಗಿ ಸಾಧನೆ ಮಾಡಿ ಕನ್ನಡನಾಡಿನ ಜನತೆಯ ಹೃದಯದಲ್ಲಿ ನೆಲಸಿರುವ ಹಿರಿಯರಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರು ಒಬ್ಬರು. ಇಂಜಿನಿಯರಾಗಿ, ದಿವಾನರಾಗಿ ಸಮಾಜದ ಅಭಿವೃದ್ಧಿಗಾಗಿ ಇವರು ಸಲ್ಲಿಸಿರುವ ಸೇವೆಯ ಪರಿಚಯಮಾಡಿಕೊಡುವುದು ಇಲ್ಲಿನ ಆಶಯ.



### ಅರ್ಥೈಸಿ ಓದಿ

**ಶತಮಾನೋತ್ಸವ, ಹರಿಕಾರ, ಪಾಳೆಯಗಾರ, ವಂಶಪಾರಂಪರ್ಯ, ಅನ್ವೇಷಣೆ, ಮನ್ವಂತರ, ಅನುಷ್ಠಾನ, ಜಲಾಶಯ, ಮನೋಸ್ಥೈರ್ಯ, ಸ್ವಯಂಚಾಲಿತ**

"ದುರದೃಷ್ಟವಶಾತ್ ಭಾರತೀಯರಾದ ನಾವು ಹೆಚ್ಚು ಮಾತನಾಡುವವರು ಮತ್ತು ನುಡಿದಂತೆ ನಡೆಯಲಾರದವರೆಂಬ ದೂಷಣೆಗೆ ಒಳಗಾಗಿದ್ದೇವೆ. ತಾವು ಈ ಮಾತಿಗೆ ಬಹುದೊಡ್ಡ ರೀತಿಯಲ್ಲಿ ಹೊರತಾಗಿದ್ದೀರಿ. ತಾವು ಕಡಿಮೆ ಮಾತನಾಡಿದ್ದೀರಿ; ಹೆಚ್ಚು ಕೆಲಸ ಮಾಡಿದ್ದೀರಿ. ಅದನ್ನು ನಾವು ತಮ್ಮಿಂದ ಕಲಿಯೋಣ". ಪಂಡಿತ್ ಜವಾಹರಲಾಲ್ ನೆಹರು ಅವರು ಬೆಂಗಳೂರಿನಲ್ಲಿ ನಡೆದ ವಿಶ್ವೇಶ್ವರಯ್ಯ ಅವರ ಶತಮಾನೋತ್ಸವ ಸಮಾರಂಭದಲ್ಲಿ ಅವರ ಬಗ್ಗೆ ಈ ರೀತಿ ನುಡಿದರು. ಅವರ ಒಂದೊಂದು ಮಾತುಗಳು ಸರ್. ಎಂ. ವಿ. ಅವರಿಗೆ ಅಕ್ಷರಶಃ ಸಲ್ಲುತ್ತಿದ್ದವು. ಇವರು ಭಾರತದ ಅಧುನಿಕತೆಯ ಹರಿಕಾರರಾಗಿ ವಾಸ್ತವ ಚಿಂತನೆ, ನಿಸ್ವಾರ್ಥ ನಡತೆ, ಸುಸಂಗತ ವೈಜ್ಞಾನಿಕ ದೃಷ್ಟಿ, ಯೋಜನೆ ಮತ್ತು ದಕ್ಷ ಆಡಳಿತದ ತಳಹದಿಯ ಮೇಲೆ ಹೊಸ ರಾಷ್ಟ್ರ ನಿರ್ಮಿಸಲು ಮುಂದಾದವರು.

ವಿಶ್ವೇಶ್ವರಯ್ಯ ಅವರು ಕ್ರಿಸ್ತ ಶಕ ೧೮೬೦ ಸೆಪ್ಟೆಂಬರ್ ೧೫ ರಂದು ಶ್ರೀನಿವಾಸಶಾಸ್ತ್ರಿ ಮತ್ತು ವೆಂಕಟಲಕ್ಷ್ಮಮ್ಮ ಅವರ ಎರಡನೆಯ ಮಗನಾಗಿ ಜನಿಸಿದರು. ಇವರ ಪೂರ್ವಜರು ಮೂಲತಃ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆ ಗಿಡ್ಡಲೂರು ತಾಲೂಕಿನ 'ಮೋಕ್ಷಗೊಂಡಂ' ಅಗ್ರಹಾರಕ್ಕೆ ಸೇರಿದವರು. ಕಾರಣಾಂತರದಿಂದ ಕರ್ನಾಟಕಕ್ಕೆ ವಲಸೆ ಬಂದು ಚಿಕ್ಕಬಳ್ಳಾಪುರ ಸಮೀಪದಲ್ಲಿರುವ ಮುದ್ದೇನಹಳ್ಳಿಯಲ್ಲಿ ನೆಲೆಸಿದರು. ಆವತಿ ವಂಶಕ್ಕೆ ಸೇರಿದ್ದ ಚಿಕ್ಕಬಳ್ಳಾಪುರದ ಪಾಳೆಯಗಾರ ಭೈರೇಗೌಡ ಮುದ್ದೇನಹಳ್ಳಿ ಮತ್ತು ಬಂಡಹಳ್ಳಿ ಗ್ರಾಮಗಳನ್ನು ಇವರ ಮನೆತನಕ್ಕೆ ಉಂಬಳಿಯಾಗಿ ನೀಡಿದ್ದನು. ವಿಶ್ವೇಶ್ವರಯ್ಯ ಅವರ ಪೂರ್ವಜರು ಈ ರಾಜರಲ್ಲಿ

ವಂಶಪಾರಂಪರ್ಯವಾಗಿ ಸೇವೆ ಸಲ್ಲಿಸುತ್ತಿದ್ದರು. ಮೊದಲಿನಿಂದಲೂ ಅವರ ಮನೆತನಕ್ಕೆ 'ಮೋಕ್ಷಗೊಂಡಂ' ಎಂಬ ಅವರ ಮೂಲ ಸ್ಥಳದ ಹೆಸರು ಸೇರಿಕೊಂಡಿತ್ತು. ವೆಂಕಟಲಕ್ಷ್ಮಮ್ಮ ಅವರಿಗೆ ಮಕ್ಕಳು ಹೆಚ್ಚು ಓದಿ ದೊಡ್ಡ ವ್ಯಕ್ತಿಗಳಾಗಬೇಕೆಂಬ ಹಂಬಲವಿತ್ತು. ಅದಕ್ಕಾಗಿ ಸಂಸಾರವನ್ನು ಚಿಕ್ಕಬಳ್ಳಾಪುರಕ್ಕೆ ಸ್ಥಳಾಂತರಿಸಿದರು.

ವಿಶ್ವೇಶ್ವರಯ್ಯ ಅವರ ಪ್ರಾಥಮಿಕ ಶಿಕ್ಷಣ ಚಿಕ್ಕಬಳ್ಳಾಪುರದಲ್ಲಿ ನಡೆಯಿತು.ಇವರ ಗುರುಗಳಾಗಿದ್ದ ನಾಥಮುನಿನಾಯ್ಡು ಅವರಿಗೆ ಶಿಷ್ಯನ ಸನ್ನಡತೆ, ಶಿಸ್ತು ತುಂಬ ಹಿಡಿಸಿತ್ತು. ಅವರು ಒಳ್ಳೆಯ ಪುಸ್ತಕಗಳನ್ನು ಓದುವಂತೆ ಮಾರ್ಗದರ್ಶನ ಮಾಡುತ್ತಿದ್ದರು. ಇದರಿಂದ ವಯಸ್ಸಿಗೆ ಮೀರಿದ ಜ್ಞಾನ ಸಂಪಾದನೆಗೆ ಅವಕಾಶವಾಯಿತು. ಮುಂದೆ ಸೋದರಮಾವ ಎಚ್. ರಾಮಯ್ಯ ಅವರ ಮಾರ್ಗದರ್ಶನದಂತೆ ಬೆಂಗಳೂರಿನ ವೆಸ್ಲಿಯನ್ ಪ್ರೌಢಶಾಲೆಯಲ್ಲಿ ಪ್ರೌಢಶಿಕ್ಷಣವನ್ನೂ ಸೆಂಟ್ರಲ್ ಕಾಲೇಜಿನಲ್ಲಿ ಎರಡು ವರ್ಷಗಳ ಇಂಟರ್ ಮೀಡಿಯಟ್ ಮತ್ತು ಮೂರು ವರ್ಷಗಳ ಬಿ.ಎ. ಪದವಿ ಶಿಕ್ಷಣವನ್ನೂ ಪಡೆದರು. ವ್ಯಾಸಂಗದಲ್ಲಿ ಕ್ರಮನಿಷ್ಠರಾಗಿದ್ದ ಅವರು ಜೀವನದಲ್ಲಿ ಉನ್ನತವಾದುದನ್ನು ಸಾಧಿಸಬೇಕೆಂಬ ದೃಢನಿರ್ಧಾರವನ್ನು ಹೊಂದಿದ್ದರು. ಅದಕ್ಕೆ ತಕ್ಕನಾದ ಪ್ರತಿಭೆ, ಮನೋಸ್ಥೈರ್ಯ ಅವರಲ್ಲಿತ್ತು. ಅಂದಿನ ಮೈಸೂರು ದಿವಾನರಾಗಿದ್ದ ಸಿ. ರಂಗಾಚಾರ್ಲುರವರು ನೀಡಿದ ವಿದ್ಯಾರ್ಥಿವೇತನ ಸೌಲಭ್ಯವನ್ನು ಬಳಸಿಕೊಂಡು ಪೂನಾದ ಎಂಜಿನಿಯರಿಂಗ್ ಕಾಲೇಜಿನಲ್ಲಿ ಡಿಪ್ಲೊಮಾ ಶಿಕ್ಷಣವನ್ನು ಪ್ರಥಮ ಸ್ಥಾನದಲ್ಲಿ ಪಡೆದು ಜೇಮ್ಸ್ ಬರ್ಕ್ಲಿ ಬಹುಮಾನಕ್ಕೂ ಪಾತ್ರರಾದರು.

ವಿಶ್ವೇಶ್ವರಯ್ಯನವರು ೧೮೮೪ ರಲ್ಲಿ ಮುಂಬೈ ಪ್ರಾಂತ್ಯದ ಲೋಕೋಪಯೋಗಿ ಇಲಾಖೆಯಲ್ಲಿ ಸಹಾಯಕ ಎಂಜಿನಿಯರ್ ಆಗಿ ಸೇವೆ ಪ್ರಾರಂಭಿಸಿದರು. ಖಾನ್‌ದೇಶ ಮತ್ತು ನಾಸಿಕ್ ಜಿಲ್ಲೆಗಳಲ್ಲಿ ಹರಿಯುತ್ತಿದ್ದ ಪಂಜ್ರಾ ನದಿಯ ನೀರಾವರಿ ಕಾಲುವೆಗೆ ತೂಬು ಮೇಲ್ಗಾಲುವೆಯನ್ನು ನಿರ್ಮಿಸುವ ಕಾರ್ಯದಲ್ಲಿ ಯಶಸ್ಸು ಗಳಿಸಿ ಮೇಲಧಿಕಾರಿಗಳ ಮೆಚ್ಚುಗೆಗೆ ಪಾತ್ರರಾದರು. ಮುಂಬೈ ಸರ್ಕಾರದ ಸೂಚನೆಯ ಮೇರೆಗೆ ಸಿಂಧ್ ಪ್ರಾಂತ್ಯದ ಸುಕ್ಕೂರು ಪಟ್ಟಣಕ್ಕೆ ಕುಡಿಯುವ ನೀರಿನ ಪೂರೈಕೆಯ ಕಾರ್ಯವನ್ನು ಯಶಸ್ವಿಯಾಗಿ ಪೂರೈಸಿದರು. ಅಂದಿನ ಮುಂಬೈ ಪ್ರಾಂತ್ಯದ ಗವರ್ನರ್ ಆಗಿದ್ದ ಲಾರ್ಡ್ ಸಂಡ್ ಹರ್ಸ್ಟ್ ಅವರು ಇವರನ್ನು ಮುಕ್ತ ಕಂಠದಿಂದ ಹಾಡಿಹೊಗಳಿದರು. ಪೂನಾದ ಮುಥಾ ಕಾಲುವೆಗೆ ನೀರಿನ ನೆಲೆಯಾಗಿದ್ದ ಫೀಪ್ ಜಲಾಶಯಕ್ಕೆ ಸ್ವಯಂಚಾಲಿತ ಬಾಗಿಲುಗಳನ್ನು ಅಳವಡಿಸಿದರು. ಸ್ವಯಂಚಾಲಿತ ಬಾಗಿಲುಗಳ ಅನ್ವೇಷಣೆ ವಿಶ್ವೇಶ್ವರಯ್ಯ ಅವರ ಸಾಧನೆಯ ಕಿರೀಟಕ್ಕೆ ಮತ್ತೊಂದು ಗರಿಯನ್ನು ಸೇರಿಸಿತು. ಇದನ್ನೇ ಮುಂದೆ ಗ್ವಾಲಿಯರ್‌ನ ತಿಗ್ರ ಜಲಾಶಯಕ್ಕೂ ಮೈಸೂರಿನ ಕೃಷ್ಣರಾಜಸಾಗರ (ಈಗಿನ ಮಂಡ್ಯಜಿಲ್ಲೆಯ) ಜಲಾಶಯಕ್ಕೂ ಅಳವಡಿಸಲಾಯಿತು. ಮುಂದೆ ನಾಲ್ಕು ವರ್ಷಗಳ ಕಾಲ ಮುಂಬೈ ಪ್ರಾಂತ್ಯದ ಸ್ಯಾನಿಟರಿ ಎಂಜಿನಿಯರ್ ಆಗಿ ನೇಮಕಗೊಂಡರು. ಈ ಹುದ್ದೆಗೆ ನೇಮಕವಾದ ಪ್ರಥಮ ಭಾರತೀಯರು ಎಂಬುದು ಗಮನಾರ್ಹ ಅಂಶ.

ಸ್ವತಂತ್ರ ಚಿಂತನೆಯನ್ನು ಮೈಗೂಡಿಸಿಕೊಂಡಿದ್ದ ವಿಶ್ವೇಶ್ವರಯ್ಯ ಅವರು ವೈಜ್ಞಾನಿಕ ಅನ್ವೇಷಣೆಗಾಗಿ ಸ್ವಂತ ಖರ್ಚಿನಲ್ಲಿ ಜಪಾನ್, ಯುರೋಪ್ ಮತ್ತು ಅಮೇರಿಕ ದೇಶಗಳಿಗೆ ಭೇಟಿ ನೀಡಿದರು. ಪುಟಿಯುವ ಚೈತನ್ಯ, ನಾಳೆ ಮಾಡುವುದನ್ನು ಇಂದೇ ಮಾಡು, ಇಂದು ಮಾಡುವುದನ್ನು ಈಗಲೇ ಮಾಡಬೇಕೆಂಬ ತುಡಿತ ಅವರದಾಗಿತ್ತು. ಹೈದರಾಬಾದ್ ನಗರಕ್ಕೆ ಈಸಿ ಮತ್ತು ಮೂಸಿ ನದಿಗಳ ಪ್ರವಾಹದಿಂದ ಅಪಾರ ನಷ್ಟ ಸಂಭವಿಸುತ್ತಿತ್ತು. ಅದನ್ನು ತಡೆಯಲು ಎರಡು ನದಿಗಳಿಗೂ ಪ್ರತ್ಯೇಕ ಜಲಾಶಯ ನಿರ್ಮಿಸುವುದರ ಮೂಲಕ ಸಮಸ್ಯೆಯನ್ನು ಬಗೆಹರಿಸಿದರು. ಹೈದರಾಬಾದ್ ನಗರವನ್ನು ಭಾರತದ ಸುಯೋಜಿತ ನಗರಗಳ ಸಾಲಿಗೆ ಸೇರ್ಪಡೆಯಾಗುವಂತೆ ಮಾಡಿದರು.

ವಿಶ್ವೇಶ್ವರಯ್ಯ ಅವರು ಮೂರು ವರ್ಷಗಳ ಕಾಲ ಮೈಸೂರು ಸಂಸ್ಥಾನದಲ್ಲಿ ಮುಖ್ಯ ಎಂಜಿನಿಯರ್ ಆಗಿ ಕಾರ್ಯ ನಿರ್ವಹಿಸಿದರು. ಕಾವೇರಿ ನದಿಗೆ ಕನ್ನಂಬಾಡಿ ಜಲಾಶಯ ನಿರ್ಮಾಣ ಯೋಜನೆ ಪ್ರಾರಂಭ, ರೈಲು ಮಾರ್ಗಗಳ ವಿಸ್ತರಣೆಗೆ ಕ್ರಮ, ತಾಂತ್ರಿಕ ಶಿಕ್ಷಣದ ಅಭಿವೃದ್ಧಿಗೆ ಯೋಜನೆ, ಮಾರಿಕಣಿವೆ ಜಲಾಶಯದ ನೀರು ಹಂಚಿಕೆಯ ಪುನರ್ವ್ಯವಸ್ಥೆ, ಸಣ್ಣ ನೀರಾವರಿ ವ್ಯವಸ್ಥೆಗೆ ಮರುಜೀವ, ಇವೆಲ್ಲ ಅವರ ಅಭಿವೃದ್ಧಿ ಕಾರ್ಯಗಳ ಕುರುಹು. ಇವುಗಳಿಗೂ ಮಿಗಿಲಾಗಿ ಇಲಾಖೆಯಲ್ಲಿ ಕ್ರಮಬದ್ಧ ಕಾರ್ಯನೀತಿ, ಸಂಸ್ಥಾನದಲ್ಲಿ ಶಿಸ್ತಿನ ಆಡಳಿತ, ಜನರಿಗೆ ಆಧುನಿಕ ಜೀವನ ವ್ಯವಸ್ಥೆಗೆ ಪೂರ್ವಸಿದ್ಧತೆ ಹೇಗಿರಬೇಕೆಂಬ ತಿಳಿವಳಿಕೆ ನೀಡಿದ್ದು, ಇವು ಇವರು ಉಂಟು ಮಾಡಿದ ಆಡಳಿತ ಮತ್ತು ನೈತಿಕ ಪ್ರಭಾವಗಳು.

ವಿಶ್ವೇಶ್ವರಯ್ಯ ಅವರು ಎಂಜಿನಿಯರುಗಳಿಗೆ "ನಮ್ಮ ಕೆಲಸಗಳು ಪ್ರಮಾಣದಲ್ಲಿ ಚಿಕ್ಕದಿರಬಹುದು, ಆದರೆ ಪ್ರಪಂಚದಾದ್ಯಂತ ಯಾವುದೇ ವರ್ಗದ ಕಾಮಗಾರಿಯ ಎಂಜಿನಿಯರಿಂಗ್ ಗುಣಲಕ್ಷಣಗಳು ಒಂದೇ ಆಗಿರುತ್ತವೆ. ಈ ಕಾಮಗಾರಿಗಳನ್ನು ಕುಶಲತೆ ಮತ್ತು ಕಡಿಮೆ ವೆಚ್ಚದಲ್ಲಿ ಕಾರ್ಯಗತಗೊಳಿಸಬೇಕೆಂದರೆ ಇತರ ಯಾವುದೇ ದೇಶದ ಎಂಜಿನಿಯರ್ ಪಡೆಯುವಷ್ಟೇ ತರಬೇತಿ ಮತ್ತು ಜ್ಞಾನವನ್ನು ಪಡೆಯಬೇಕು. ಮಾಹಿತಿಗಳಲ್ಲಾಗಲಿ, ವಿಧಾನಗಳಲ್ಲಾಗಲಿ ನಾವು ಹಿಂದುಳಿಯುವುದು ಉಚಿತವಲ್ಲ" ಎಂದು ಮಾರ್ಗದರ್ಶನ ನೀಡುತ್ತಿದ್ದರು.

ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ವಿಶ್ವೇಶ್ವರಯ್ಯ ಅವರನ್ನು ದಿವಾನರನ್ನಾಗಿ ನೇಮಿಸುವ ಮೂಲಕ ಹೊಸ ಮನ್ವಂತರಕ್ಕೆ ಅಡಿಪಾಯ ಹಾಕಿದರು. ಆಡಳಿತದಲ್ಲಿ ಹೊಸ ಮಾದರಿಯನ್ನು ಅನುಷ್ಠಾನಗೊಳಿಸಿ ಕಚೇರಿಯ ಕೆಲಸ ಕಾರ್ಯಗಳಲ್ಲಿ ಸುಧಾರಣೆ ತಂದರು. ಅಷ್ಟೇ ಅಲ್ಲದೆ ದಕ್ಷತೆ ಮತ್ತು ಪ್ರಾಮಾಣಿಕತೆಗೆ ಒತ್ತು ನೀಡಿದರು. ಸಂಸ್ಥಾನದಲ್ಲಿ ಸ್ಥಳೀಯ ಮಟ್ಟದಲ್ಲಿ ಕೇಂದ್ರೀಕೃತವಾಗಿದ್ದ ನ್ಯಾಯಾಂಗ ಮತ್ತು ಕಾರ್ಯಾಂಗಗಳ ಅಧಿಕಾರವನ್ನು ಪ್ರತ್ಯೇಕಗೊಳಿಸಿದರು. ರಾಜ್ಯ ಪ್ರವಾಸ ಮಾಡಿ ಅಜಮಾಯಿಷಿ ಕಾರ್ಯ ನಡೆಸಿದರು. ಸಮರ್ಥ ಕಾರ್ಯ ನಿರ್ವಹಣೆಗಾಗಿ ಸಮಿತಿ ರಚನೆಗೆ ಪ್ರಾಶಸ್ತ್ಯ ನೀಡಿದರು. ನೇಮಕಾತಿಯಲ್ಲಿ ಸ್ಥಳೀಯರಿಗೆ ಆದ್ಯತೆ ನೀಡಿದರು. ಆದರ್ಶ ಪುರುಷರೊಬ್ಬರು ದಿವಾನರಾದದ್ದು ಮೈಸೂರು ಸಂಸ್ಥಾನದ ಪುಣ್ಯ ವಿಶೇಷವೇ ಸರಿ ಎಂದು ಜನರು ಹಾಡಿ ಹೊಗಳಿದರು. ಗಾಂಧೀಜಿ ಅವರು ಮೈಸೂರಿನ ಆಡಳಿತ ರೀತಿಯನ್ನು ಮುಕ್ತಕಂಠದಿಂದ ಹೊಗಳಿದರು. ಇದರಿಂದ 'ಮೈಸೂರು ಮಾದರಿ' ಎಂಬ ಹೊಸ ಆಡಳಿತ ಮಾದರಿ ಜನ್ಮತಾಳಿತು.



ವಿಶ್ವೇಶ್ವರಯ್ಯ ಅವರು ಆಧುನಿಕ ಶಿಕ್ಷಣವೇ ಎಲ್ಲ ಸಮಸ್ಯೆಗಳಿಗೂ ಪರಮೋಚ್ಚ ಪರಿಹಾರವೆಂದು ನಂಬಿದ್ದರು. ಶಿಕ್ಷಣವು ಸಂಜೀವಿನಿ ಎಂಬುದನ್ನರಿತಿದ್ದ ಅವರು ಶಿಕ್ಷಣದ ವಿವಿಧ ಯೋಜನೆಗಳನ್ನು ರೂಪಿಸಿದರು. ಅದಕ್ಕಾಗಿ ೧೯೧೩ ರಲ್ಲಿ ಪ್ರಾಥಮಿಕ ಶಿಕ್ಷಣ ನಿಬಂಧನೆಯನ್ನು ಜಾರಿಗೆ ತಂದರು. ಪ್ರೌಢಶಿಕ್ಷಣ ಶಾಲೆಗಳು ಮದ್ರಾಸ್ ವಿಶ್ವವಿದ್ಯಾನಿಲಯದ ನಿಯಂತ್ರಣಕ್ಕೆ ಒಳಪಟ್ಟಿದ್ದವು. ಇದನ್ನು ಬದಲಿಸಿ ಸಂಸ್ಥಾನವೇ ಪ್ರತ್ಯೇಕವಾದ ಪ್ರೌಢಶಿಕ್ಷಣದ ಅಂತಿಮ ಪರೀಕ್ಷೆ ನಡೆಸುವ ಯೋಜನೆಯನ್ನು ಆರ್ಥಿಕ ಪರಿಷತ್ತಿನ ಮೂಲಕ ರೂಪುಗೊಳಿಸಿದರು.

ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ ಇವರ ದೂರದೃಷ್ಟಿಯ ಮತ್ತೊಂದು ಫಲಶ್ರುತಿ. "ಶಿಕ್ಷಣಕ್ಕಾಗಿ ಶಿಕ್ಷಣವಿರಬೇಕು. ಅದು ಕೆಲವೇ ಜನರ ಸೊತ್ತಾಗದೆ ಪ್ರಗತಿಪರ ರಾಜ್ಯದಲ್ಲಿ ಎಲ್ಲರ ಆಜನ್ಮಸಿದ್ಧ ಹಕ್ಕಾಗಬೇಕು" ಎಂಬುದನ್ನು ಮನಗಂಡ ಇವರು ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣಕ್ಕೆ ಆದ್ಯತೆ ನೀಡಿದರು. ಇದಕ್ಕಾಗಿಯೇ ಬೆಂಗಳೂರಿನಲ್ಲಿ ಮೆಕಾನಿಕಲ್ ಎಂಜಿನಿಯರಿಂಗ್ ಶಾಲೆ, ಮೈಸೂರಿನಲ್ಲಿ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಗಳನ್ನು

ಪ್ರಾರಂಭಿಸಿದರು. ಮಹಿಳಾ ಶಿಕ್ಷಣದ ಬಗ್ಗೆ ಸಹಾನುಭೂತಿ ಹೊಂದಿದ್ದ ಇವರು ಗೃಹಶಿಕ್ಷಣ ಶಾಲೆಗಳನ್ನು ಸ್ಥಾಪಿಸಿದರು. ವಿದ್ಯಾರ್ಥಿವೇತನವನ್ನು ಕೊಡುವುದರ ಮೂಲಕ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಅನುವು ಮಾಡಿಕೊಟ್ಟರು. ಇದಲ್ಲದೆ ಭಾಷೆ, ಸಾಹಿತ್ಯ ಮತ್ತು ಸಂಶೋಧನೆಗಳಿಗೂ ಪ್ರೋತ್ಸಾಹ ನೀಡಿದರು. ಓದುವ ಹವ್ಯಾಸ ಬೆಳೆಸುವ ದೃಷ್ಟಿಯಿಂದ ಗ್ರಂಥಾಲಯಗಳ ವ್ಯವಸ್ಥೆಗೆ ಅಸ್ತಿಭಾರ ಹಾಕಿದರು. ಏಕೀಕೃತ ಕರ್ನಾಟಕದ ರಚನೆ ಮತ್ತು ಕನ್ನಡ ಭಾಷೆ ಹಾಗೂ ಸಾಹಿತ್ಯಗಳ ಬಗ್ಗೆ ಸಾರ್ವಜನಿಕರಲ್ಲಿ ಉಂಟಾಗಿದ್ದ ಒಲವನ್ನು ಮನಗಂಡು 'ಕನ್ನಡ ಸಾಹಿತ್ಯ ಪರಿಷತ್ತನ್ನು' ಸ್ಥಾಪಿಸಿದ್ದು ಇವರ ಕಾಲದ ಮತ್ತೊಂದು ಮಹತ್ವದ ಸಾಧನೆ.

ವಿಶ್ವೇಶ್ವರಯ್ಯ ಅವರು ಕೈಗಾರಿಕೆಗೆ ಅಗ್ರ ಪ್ರಾಶಸ್ತ್ಯ ನೀಡಿದ್ದರು. "ಕೈಗಾರಿಕೀಕರಣ ಇಲ್ಲವೆ ಅವನತಿ" ಎಂಬ ಘೋಷಣೆ ಮಾಡಿದರು. ಭದ್ರಾವತಿಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯನ್ನು ಸ್ಥಾಪಿಸುವುದು ಅವರ ದೊಡ್ಡ ಗುರಿಯಾಗಿತ್ತು. ಇದಲ್ಲದೆ ಹಂಚಿನ ಕಾರ್ಖಾನೆ, ಮೂಳೆ ಮತ್ತು ಗೊಬ್ಬರ ತಯಾರಿಕಾ ಸ್ಥಾವರ, ಸಕ್ಕರೆ ಕಾರ್ಖಾನೆ, ಔಷಧಿ ತಯಾರಿಕಾ ಘಟಕ, ಗಂಧದ ಎಣ್ಣೆ, ಬೆಂಕಿಕಡ್ಡಿ ಹಾಗೂ ಕಾಗದದ ಕಾರ್ಖಾನೆಗಳು ಸ್ಥಾಪಿತವಾದವು. ಸೋಪು ಹಾಗೂ ಲೋಹ ತಯಾರಿಕೆ, ಕಲೆ ಮತ್ತು ಕರಕುಶಲ ಡಿಪೋ, ಕೃಷ್ಣರಾಜೇಂದ್ರ ಬಟ್ಟೆ ಗಿರಣಿ, ಕಾಗದದ ತಿರುಳು, ರಟ್ಟು, ಪೆನ್ಸಿಲ್, ಬೆಂಕಿಕಡ್ಡಿ ಮತ್ತು ಪೀಠೋಪಕರಣಗಳ ತಯಾರಿಕಾ ಘಟಕಗಳು –ಹೀಗೆ ನೂರಾರು ಕೈಗಾರಿಕೆಗಳು ಪ್ರಾರಂಭಗೊಂಡವು.

ರಾಜ್ಯದ ಆರ್ಥಿಕ ಚಟುವಟಿಕೆಗಳಿಗೆ ಭದ್ರ ಬುನಾದಿ ಹಾಕುವ ಉದ್ದೇಶದಿಂದ ಹಣಕಾಸು ನೀತಿಯಲ್ಲಿ ಮಾರ್ಪಾಡು ಮಾಡಿದರು. ಇದಕ್ಕಾಗಿ ೧೯೧೩ ರಲ್ಲಿ ಮೈಸೂರು ಬ್ಯಾಂಕನ್ನು ಸ್ಥಾಪಿಸಿದರು. ಅನಂತರ ಉಳಿತಾಯ ಬ್ಯಾಂಕ್‌ಗಳು ಅಸ್ತಿತ್ವಕ್ಕೆ ಬಂದವು. ಕೈಗಾರಿಕೆಗಳ ಅಭಿವೃದ್ಧಿಗೆ ಫೀಡರ್ ಬ್ಯಾಂಕ್ ಹಾಗೂ ಕೈಗಾರಿಕಾ ಹೂಡಿಕೆ ಮತ್ತು ಅಭಿವೃದ್ಧಿ ನಿಧಿಗಳು ರಚಿತಗೊಂಡವು. ಸಾರ್ವಜನಿಕ ಜೀವವಿಮಾ ಯೋಜನೆ ಜಾರಿಗೆ ತಂದರು. ರೈತರಿಗೆ ಹಾಗೂ ಕರಕುಶಲ ಕೆಲಸಗಾರರಿಗೆ ಸಾಲದ ಸೌಲಭ್ಯ ನೀಡಲು ಸಹಕಾರಿ ಕ್ಷೇತ್ರವನ್ನು ಬಲವರ್ಧನೆಗೊಳಿಸಿದರು. ಪ್ರಾಂತೀಯ ಸಹಕಾರಿ ಬ್ಯಾಂಕ್‌ಗಳನ್ನು ಸ್ಥಾಪಿಸಿದರು. ರಾಜ್ಯದ ಆಸ್ತಿಯನ್ನು ಹೆಚ್ಚಿಸಿ, ಆದಾಯ ತರುವುದರ ಮೂಲಕ ಅಭಿವೃದ್ಧಿ ಕಾರ್ಯಗಳ ಪ್ರಭಾವವನ್ನು ಅಳೆಯಲು ಅನುಕೂಲವಾಗುವಂತೆ ಆಯವ್ಯಯದಲ್ಲಿ ಹೊಸ ದೃಷ್ಟಿಕೋನವನ್ನು ಕಂಡುಕೊಂಡರು.

ವಿಶ್ವೇಶ್ವರಯ್ಯ ಅವರ ಆಡಳಿತಾವಧಿಯಲ್ಲಿ ಮೈಸೂರು ರಾಜಧಾನಿಯಾಗಿ ಮತ್ತು ರಾಜ್ಯದ ಎರಡನೆಯ ದೊಡ್ಡ ನಗರವಾಗಿ ಪ್ರಸಿದ್ಧಿ ಪಡೆಯಿತು. ಮೈಸೂರಿನ ಹೊಸ ಅರಮನೆ, ಸಿ. ರಂಗಾಚಾರ್ಲು ಸ್ಮಾರಕ ಪುರಭವನ, ಅರಮನೆ ವಿಸ್ತರಣೆ, ಕೃಷ್ಣರಾಜೇಂದ್ರ ಆಸ್ಪತ್ರೆ, ಲಲಿತಮಹಲ್ ಅರಮನೆಯ ತಳಹದಿ ಮತ್ತು ಪ್ರಧಾನ ಅರಮನೆಯ ಕಚೇರಿ ಸಮುಚ್ಚಯಗಳು ಇವರ ಕಾಲದಲ್ಲಿಯೇ ನಿರ್ಮಾಣಗೊಂಡವು. ಶಿವನಸಮುದ್ರ ಜಲವಿದ್ಯುತ್ ಉತ್ಪಾದನೆಯನ್ನು ಸಮಗ್ರವಾಗಿ ಅಭಿವೃದ್ಧಿ ಪಡಿಸಿದರು. ಇವುಗಳಲ್ಲದೆ ಜನಾರೋಗ್ಯವನ್ನು ಕಾಪಾಡುವ ದೃಷ್ಟಿಯಿಂದ ಹಲವಾರು ಆಸ್ಪತ್ರೆಗಳನ್ನು ಪ್ರಾರಂಭಿಸಿದರು. ಸಾಂಕ್ರಾಮಿಕ ರೋಗಗಳ ನಿವಾರಣೆಗೆ ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಹೀಗೆ ವಿಶ್ವೇಶ್ವರಯ್ಯ ಅವರು ಹೊಸಯುಗದ ಹರಿಕಾರರಾಗಿ ಮೈಸೂರು ಸಂಸ್ಥಾನಕ್ಕೆ ನವಚೈತನ್ಯವನ್ನು ತುಂಬಿದರು.

ಗೊಮ್ಮಟವ್ಯಕ್ತಿತ್ವದ ದಾರ್ಶನಿಕ ನೇತಾರರಾಗಿ 'ಆಡು ಮುಟ್ಟದ ಸೊಪ್ಪಿಲ್ಲ' ಎಂಬ ಗಾದೆಮಾತಿನಂತೆ ಬೆಳೆದ ವಿಶ್ವೇಶ್ವರಯ್ಯ ಅವರಿಗೆ ಬ್ರಿಟಿಷ್ ಸರ್ಕಾರ 'ಸರ್' ಪದವಿಯನ್ನು ನೀಡಿ ಗೌರವಿಸಿತು. ಅವರ ಸಾಧನೆಯನ್ನು ಗುರುತಿಸಿ ಭಾರತ ಸರ್ಕಾರ ದೇಶದ ಅತ್ಯುನ್ನತ 'ಭಾರತ ರತ್ನ' ಪ್ರಶಸ್ತಿಯನ್ನು ಸಲ್ಲಿಸಿತು. ದೇಶದ ಹಲವಾರು ಪ್ರತಿಷ್ಠಿತ ಸಂಸ್ಥೆ ಹಾಗೂ ವಿಶ್ವವಿದ್ಯಾನಿಲಯಗಳು ಸದಸ್ಯತ್ವ ಹಾಗೂ ಗೌರವ ಡಾಕ್ಟರೇಟ್ ಪದವಿಗಳನ್ನು ನೀಡಿ ಗೌರವಿಸಿದವು. ಮಹಾನ್ ಆಡಳಿತಗಾರರಾದ ಇವರ ಶತಮಾನೋತ್ಸವದ ಸವಿನೆನಪಿಗಾಗಿ ವಿಶೇಷ ಅಂಚೆಚೀಟಿ ಬಿಡುಗಡೆ ಮಾಡಲಾಯಿತು. ಮೈಸೂರು ಸಂಸ್ಥಾನದ ದಿವಾನ ಹುದ್ದೆಯಿಂದ ನಿವೃತ್ತಿಯಾದ ಅನಂತರವೂ ದೇಶಸೇವೆಯ ಪಥದಲ್ಲಿಯೇ ಸಾಗಿದರು. ತಮ್ಮ ಪರಿಪಕ್ವ ಅನುಭವವನ್ನು ದೇಶದ ಅಭಿವೃದ್ಧಿಗಾಗಿಯೇ ಬಳಸಿಕೊಂಡರು. ಸಾಹಿತ್ಯ ಸೃಷ್ಟಿಯನ್ನು ಮಾಡಿದ್ದಕ್ಕೆ ನಿದರ್ಶನ ಅವರ 'ರಿಕನ್‌ಸ್ಟ್ರಕ್ಟಿಂಗ್ ಇಂಡಿಯಾ', 'ಪ್ಲಾನ್ಡ್ ಎಕಾನಮಿ ಫಾರ್ ಇಂಡಿಯ' ಹಾಗೂ ಆತ್ಮಚರಿತ್ರೆ 'ಮೆಮ್ವಾರ್ಸ್ (Memoirs) ಆಫ್ ಮೈ ವರ್ಕಿಂಗ್ ಲೈಫ್', 'ನೇಷನ್ ಬಿಲ್ಡಿಂಗ್ ಪ್ಲಾನ್ ಫಾರ್ ಇಂಡಿಯಾ' ಕೃತಿಗಳು. ಸೆಪ್ಟಂಬರ್ ೧೫, ೧೯೬೦ ರಂದು ಶತಮಾನೋತ್ಸವ ಅಭಿನಂದನೆ 'ಎಂ. ವಿ.' ಅಭಿನಂದನಾ ಗ್ರಂಥವನ್ನು ಪ್ರಕಟಿಸಲಾಯಿತು. ೧೦೨ ವರ್ಷಗಳ ತುಂಬುಜೀವನ ಪೂರೈಸಿದ ಸರ್ ಎಂ. ವಿ. ಅವರು ೧೯೬೨ ರಲ್ಲಿ ಇಹಲೋಕ ತ್ಯಜಿಸಿದರು. ಇವರ ಹುಟ್ಟು ಹಬ್ಬದ ನೆನಪಿಗಾಗಿ ಇಂದಿಗೂ 'ಎಂಜಿನಿಯರ್ಸ್ ದಿನಾಚರಣೆ' ಯನ್ನು ಮಾಡಲಾಗುತ್ತದೆ.

## ಕರ್ತೃ – ಭಾವ – ಆಕರ

**ಡಿ. ಎಸ್. ಜಯಪ್ಪಗೌಡ** (೧೯೪೭) ಇವರು ಚಿಕ್ಕಮಗಳೂರು ಜಿಲ್ಲೆ ದಾರದಹಳ್ಳಿಯವರು. ದಾರದಹಳ್ಳಿ ಸುಬ್ಬೇಗೌಡ ಜಯಪ್ಪಗೌಡ ಎಂಬುದು ಇವರ ಪೂರ್ಣಹೆಸರು. ಇತಿಹಾಸ ಮತ್ತು ಭಾಷಾಂತರ ವಿಷಯದಲ್ಲಿ ಮಹತ್ವದ ಕೃತಿಗಳನ್ನು ರಚಿಸಿರುವ ಇವರು ಮೈಸೂರು ವಿಶ್ವವಿದ್ಯಾನಿಲಯದ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗದಲ್ಲಿ ಸೇವೆಸಲ್ಲಿಸಿದ್ದಾರೆ.

**ಕರ್ನಾಟಕ ಗ್ರಾಮೀಣ ಸಂಸ್ಥೆಗಳು. ಕರ್ನಾಟಕದ ಕಡಲಾಚೆಯ ಸಂಪರ್ಕಗಳು. ಮೈಸೂರು ಒಡೆಯರು. ಜನಪದ ಆಟಗಳು, ದಿವಾನ್ ಸರ್.ಎಂ.ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು** ಶ್ರೀಯುತರ ಪ್ರಮುಖ ಕೃತಿಗಳು. **ಕರ್ನಾಟಕದ ಕಡಲಾಚೆಯ ಸಂಪರ್ಕಗಳು** ಕೃತಿಗೆ **ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ** ಲಭಿಸಿದೆ. ಧಾರವಾಡ ಕರ್ನಾಟಕ ಸಂಘದ **ಸಂಶೋಧನಾ ಬಹುಮಾನಕ್ಕೆ** ಭಾಜನರಾಗಿದ್ದಾರೆ.

[ಆಧಾರ – ಚಿಕ್ಕಮಗಳೂರು ಜಿಲ್ಲೆಯ ಸಾಹಿತ್ಯ ಸಾಧಕರು. ಕ.ಸಾ.ಪ. ಪ್ರಕಟಣೆ]

ಪರಿಶ್ರಮ, ಪ್ರತಿಭೆ, ನಿಷ್ಠೆಯಿದ್ದರೆ, ಧ್ಯೇಯವನ್ನು ಸಾಧಿಸುತ್ತೇನೆಂಬ ದೃಢಸಂಕಲ್ಪವಿದ್ದರೆ ಸವಾಲುಗಳನ್ನು ಎದುರಿಸಿ ಯಶಸ್ಸು ಪಡೆಯಬಹುದು. ಬಡತನದ ಬವಣೆಯಾಗಲಿ, ಯಾವುದೇ ತಾರತಮ್ಯವಾಗಲಿ ಅದನ್ನು ನಿರ್ಬಂಧಿಸಲಾರದು. ವ್ಯಕ್ತಿತ್ವದ ವಿಕಾಸಕ್ಕೆ ಅಡ್ಡಿಯಾಗಲಾರವು. ವ್ಯಕ್ತಿಯು ಸಮಾಜಮುಖಿಯಾಗಿ ಲಭಿಸಿದ ಅಧಿಕಾರವನ್ನು ಸಮರ್ಥವಾಗಿ ಬಳಕೆ ಮಾಡಿಕೊಂಡಾಗ ಜನಮನದಲ್ಲಿ ಶಾಶ್ವತ ಸ್ಥಾನ ಪಡೆಯಬಹುದೆಂಬುದಕ್ಕೆ ಸರ್.ಎಂ.ವಿಶ್ವೇಶ್ವರಯ್ಯ ಅವರು ಪ್ರತ್ಯಕ್ಷ ಸಾಕ್ಷಿಯಾಗಿದ್ದಾರೆ. ಉತ್ಕರ್ಷದ ಆಕಾಂಕ್ಷೆ ಇದ್ದವರಿಗೆ ಜೀವಂತ ಆದರ್ಶ ವ್ಯಕ್ತಿತ್ವದ ಪರಿಚಯ ಮಾದರಿಯಾಗಬಲ್ಲದು. ಬಹುಮುಖಿತ್ವದ ಅನುಭವವಾಗಬಲ್ಲದು.

**ಡಿ.ಎಸ್. ಜಯಪ್ಪಗೌಡ** ವಿರಚಿತ **ದಿವಾನ್ ಸರ್.ಎಂ. ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು** ಎಂಬ ಸಂಶೋಧನಾ ಗ್ರಂಥದಿಂದ **'ಭಾಗ್ಯಶಿಲ್ಪಿ ಸರ್.ಎಂ.ವಿಶ್ವೇಶ್ವರಯ್ಯ** ಗದ್ಯಭಾಗವನ್ನು ಆಯ್ಕೆ ಮಾಡಲಾಗಿದೆ.

## ಪದ – ಅರ್ಥ

ದೂಷಣೆ – ನಿಂದನೆ; ಶತಮಾನೋತ್ಸವ – ನೂರು ವರ್ಷ ತುಂಬಿದ ಸಮಯದಲ್ಲಿ ಆಚರಿಸುವ ಉತ್ಸವ; ಹರಿಕಾರ – ಮುಂದಾಳು; ಸುಸಂಗತ – ಯೋಗ್ಯವಾದ; ಪಾಳೆಯಗಾರ – ಒಂದು ಚಿಕ್ಕ ಸೀಮೆಯ ಅಧಿಪತಿ, ನಿರಂಕುಶ ಪ್ರಭುತ್ವದ ತುಂಡರಸ; ಹಂಬಲ – ಬಯಕೆ; ಸ್ಥೈರ್ಯ – ದೃಢತೆ; ವೈಜ್ಞಾನಿಕ – ವಿಜ್ಞಾನಕ್ಕೆ ಸಂಬಂಧಿಸಿದ; ಕಾಮಗಾರಿ – ಕೆಲಸ; ಮುಕ್ತಕಂಠ – ತೆರೆದ ಮನಸ್ಸು; ತಾಂತ್ರಿಕ – ತಂತ್ರಜ್ಞಾನಕ್ಕೆ ಸಂಬಂಧಿಸಿದ; ಅಸ್ತಿಭಾರ – ಬುನಾದಿ ; ಸಮುಚ್ಚಯ – ಸಮೂಹ; ಗೊಮ್ಮಟವ್ಯಕ್ತಿತ್ವ – ಉನ್ನತ ವ್ಯಕ್ತಿತ್ವ; ಗಿರಣಿ – ಹತ್ತಿಯನ್ನು ಬಿಡಿಸುವ, ನೂಲು ಮಾಡುವ, ಧಾನ್ಯ ಬೀಸುವ ಯಂತ್ರ ಮತ್ತು ಇಂತಹ ಯಂತ್ರಗಳಿಂದ ಕೂಡಿದ ಕಟ್ಟಡ, ಮಿಲ್ಲು.

## ಪಠ್ಯಾಧಾರ ಟಿಪ್ಪಣಿ

**ಸ್ಯಾನಿಟರಿ – (ಇಂಗ್ಲಿಷ್ ಪದ)** – ನಿರ್ಮಲೀಕರಣ, ಆರೋಗ್ಯ ರಕ್ಷಣೆಗೆ ಸಂಬಂಧಿಸಿದ.

**ದಿವಾನ – (ಪರ್ಷಿಯನ್ ಪದ)** – ಸಚಿವ, ಮಂತ್ರಿ, ಹಿರಿಯ, ಮುಖ್ಯಕಾರಭಾರಿ.

**ಮನ್ವಂತರ – (ಸಂಸ್ಕೃತ ಪದ)** – ಒಬ್ಬ ಮನುವಿನ ಕಾಲ

**ಅಜಮಾಯಿಷಿ – (ಪರ್ಷಿಯನ್ ಪದ)** ಗಳಿಸಿದ ಅನುಭವದ ಆಧಾರದಿಂದ ಮುಂದೇನು ಮಾಡಬೇಕು? ಎಂಬುದನ್ನು ಕಲ್ಪನೆ ಮಾಡಿಕೊಳ್ಳುವುದು.

**ಉಂಬಳಿ** – ರಾಜಪ್ರಭುತ್ವದ ಕಾಲದಲ್ಲಿ ಜೀವನ ನಿರ್ವಹಣೆಗಾಗಿ ಕೊಡಲ್ಪಟ್ಟ ಭೂಮಿ

**ಆವತಿ** – ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ಮತ್ತು ಜಿಲ್ಲಾ ಕೇಂದ್ರವಾದ ಚಿಕ್ಕಬಳ್ಳಾಪುರ ಮಾರ್ಗದ ಮಧ್ಯೆ ಇರುವ ಒಂದು ಊರು. ಇಲ್ಲಿನ ಪಾಳೆಯಗಾರ ವಂಶಕ್ಕೆ **'ಆವತಿವಂಶ'** ಎಂಬ ಹೆಸರು ಬಂತು.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧. ವಿಶ್ವೇಶ್ವರಯ್ಯನವರ ಪೂರ್ವಜರು ಎಲ್ಲಿಯವರು?

೨. ವೆಂಕಟಲಕ್ಷ್ಮಮ್ಮ ಅವರು ತಮ್ಮ ಕುಟುಂಬವನ್ನು ಚಿಕ್ಕಬಳ್ಳಾಪುರಕ್ಕೆ ಸ್ಥಳಾಂತರಿಸಿದ್ದು ಏಕೆ?

೩. ಬ್ರಿಟಿಷ್ ಸರ್ಕಾರ ವಿಶ್ವೇಶ್ವರಯ್ಯ ಅವರಿಗೆ ಯಾವ ಪದವಿಯನ್ನು ನೀಡಿ ಗೌರವಿಸಿತು?

೪. ವಿಶ್ವೇಶ್ವರಯ್ಯ ಅವರನ್ನು ದಿವಾನರಾಗಿ ನೇಮಿಸಿದವರು ಯಾರು?

೫. ವಿಶ್ವೇಶ್ವರಯ್ಯ ಅವರ ಹುಟ್ಟು ಹಬ್ಬದ ನೆನಪಿಗಾಗಿ ಯಾವ ದಿನಾಚರಣೆಯನ್ನು ಮಾಡಲಾಗುತ್ತಿದೆ?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ಶಿಕ್ಷಣದ ಬಗ್ಗೆ ವಿಶ್ವೇಶ್ವರಯ್ಯ ಅವರು ಏನೆಂದು ಹೇಳಿದ್ದಾರೆ?

೨. ನೆಹರೂ ಅವರು ಸರ್. ಎಂ. ವಿಶ್ವೇಶ್ವರಯ್ಯ ಅವರ ಬಗ್ಗೆ ಏನೆಂದು ಹೇಳಿದ್ದಾರೆ?

೩. ಹೈದರಾಬಾದ್ ನಗರದಲ್ಲಿ ವಿಶ್ವೇಶ್ವರಯ್ಯ ಅವರು ಸಲ್ಲಿಸಿದ ಸೇವೆ ಯಾವುದು?

೪. ಎಂಜಿನಿಯರ್‌ಗಳಿಗೆ ವಿಶ್ವೇಶ್ವರಯ್ಯ ಅವರು ಏನೆಂದು ಮಾರ್ಗದರ್ಶನ ಮಾಡಿದರು?

೫. ಹಣಕಾಸು ನೀತಿಯಲ್ಲಿ ವಿಶ್ವೇಶ್ವರಯ್ಯ ಅವರು ಮಾಡಿದ ಮಾರ್ಪಾಡುಗಳಾವುವು?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು-ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಮುಂಬೈ ಮತ್ತು ಪೂನಾ ನಗರಗಳಲ್ಲಿ ವಿಶ್ವೇಶ್ವರಯ್ಯ ಅವರು ಸಲ್ಲಿಸಿದ ಸೇವೆಯನ್ನು ವಿವರಿಸಿ.

೨. ವಿಶ್ವೇಶ್ವರಯ್ಯ ಅವರು ಮೈಸೂರು ದಿವಾನರಾಗಿ ಸಲ್ಲಿಸಿದ ಸೇವೆಯನ್ನು ಕುರಿತು ಬರೆಯಿರಿ.

೩. ಶಿಕ್ಷಣ ಕ್ಷೇತ್ರಕ್ಕೆ ವಿಶ್ವೇಶ್ವರಯ್ಯ ಅವರು ಸಲ್ಲಿಸಿದ ಕೊಡುಗೆಯನ್ನು ತಿಳಿಸಿ.

**ಈ. ಸಂದರ್ಭಾನುಸಾರ ಸ್ವಾರಸ್ಯವನ್ನು ವಿವರಿಸಿ.**

೧. "ತಾವು ಕಡಿಮೆ ಮಾತನಾಡಿದ್ದೀರಿ ಮತ್ತು ಹೆಚ್ಚು ಕೆಲಸ ಮಾಡಿದ್ದೀರಿ"

೨. "ಅವರ ಸಾಧನೆಯ ಕಿರೀಟಕ್ಕೆ ಮತ್ತೊಂದು ಗರಿಯನ್ನು ಸೇರಿಸಿತು"

೩. "ಆದರ್ಶ ಪುರುಷರೊಬ್ಬರು ದಿವಾನರಾದದ್ದು ಮೈಸೂರು ಸಂಸ್ಥಾನದ ಪುಣ್ಯ ವಿಶೇಷವೇ ಸರಿ".

೪. "ಶಿಕ್ಷಣಕ್ಕಾಗಿ ಶಿಕ್ಷಣವಿರಬೇಕು. ಅದು ಕೆಲವೇ ಜನರ ಸ್ವತ್ತಾಗದೆ ಪ್ರಗತಿಪರ ರಾಜ್ಯದಲ್ಲಿ ಎಲ್ಲರ ಆಜನ್ಮಸಿದ್ಧ ಹಕ್ಕಾಗಬೇಕು"

೫. "ಮಾಹಿತಿಗಳಲ್ಲಾಗಲಿ, ವಿಧಾನಗಳಲ್ಲಾಗಲಿ ನಾವು ಹಿಂದುಳಿಯುವುದು ಉಚಿತವಲ್ಲ"

**ಉ. ಬಿಟ್ಟ ಸ್ಥಳವನ್ನು ಸರಿಯಾದ ಪದದಿಂದ ತುಂಬಿರಿ.**

೧. ವಿಶ್ವೇಶ್ವರಯ್ಯ ಅವರು ಹೈದರಾಬಾದ್ ನಗರವನ್ನು ________ ನಗರಗಳ ಸಾಲಿಗೆ ಸೇರುವಂತೆ ಮಾಡಿದರು.

೨. ವಿಶ್ವೇಶ್ವರಯ್ಯ ಅವರ ಪ್ರಾಥಮಿಕ ಶಿಕ್ಷಣ ________ ದಲ್ಲಿ ನಡೆಯಿತು.

೩. ವಿಶ್ವೇಶ್ವರಯ್ಯ ಅವರು ಮುಂಬೈ ಪ್ರಾಂತ್ಯದಲ್ಲಿ ________ ಆಗಿ ಸೇವೆ ಪ್ರಾರಂಭಿಸಿದರು.

೪. ಮುಂಬೈ ಪ್ರಾಂತ್ಯದ ಗವರ್ನರ್ ಆಗಿದ್ದ ________ ಅವರು ವಿಶ್ವೇಶ್ವರಯ್ಯ ಅವರನ್ನು ಮುಕ್ತಕಂಠದಿಂದ ಶ್ಲಾಘಿಸಿದರು.

೫. ಭಾರತಸರಕಾರವು ವಿಶ್ವೇಶ್ವರಯ್ಯನವರಿಗೆ ________ ಎಂಬ ಪ್ರಶಸ್ತಿ ನೀಡಿ ಗೌರವಿಸಿತು.

# ಸೈದ್ಧಾಂತಿಕ ಭಾಷಾಭ್ಯಾಸ

## ಸಮಾಸಗಳು

**ಈ ವಾಕ್ಯಗಳನ್ನು ಗಮನಿಸಿ:–**

**೧. ಅಲ್ಲಿ ಹಿರಿದಾದ ತೊರೆಯು ಹರಿಯುತ್ತಿತ್ತು**

**೨. ಬಸವನು ಕಾಲಿನ ಬಳೆಗಳನ್ನು ತಂದನು**

**೩. ಕೊಡಗಿನ ಜನರು ಕೆರೆಗಳ, ಕಟ್ಟೆಗಳ, ಬಾವಿಗಳ ಸೌಲಭ್ಯವನ್ನು ಪಡೆದಿದ್ದಾರೆ.**

ಒಂದನೆಯ ವಾಕ್ಯದಲ್ಲಿರುವ **'ಹಿರಿದಾದ, ತೊರೆ'** ಎಂಬ ಪದಗಳನ್ನು **'ಹೆದ್ದೊರೆ'** ಎಂದೂ ಎರಡನೆಯ ವಾಕ್ಯದಲ್ಲಿರುವ **'ಕಾಲಿನ ಬಳೆಗಳನ್ನು'** ಎಂಬ ಪದಗಳನ್ನು **'ಕಾಲುಬಳೆ'** ಎಂಬುದಾಗಿಯೂ ಮೂರನೆಯ ವಾಕ್ಯದ **'ಕೆರೆಗಳ, ಕಟ್ಟೆಗಳ, ಬಾವಿಗಳ'** ಎಂಬ ಪದಗಳನ್ನು **'ಕೆರೆಕಟ್ಟೆಬಾವಿಗಳ'** ಎಂಬುದಾಗಿಯೂ ಪ್ರಯೋಗಿಸಲಾಗಿದೆ. ಹೀಗೆ___

**ಎರಡು ಅಥವಾ ಅನೇಕ ಪದಗಳನ್ನು ಅರ್ಥಕ್ಕನುಸಾರವಾಗಿ ಸೇರಿಸಿ (ಅರ್ಥಕ್ಕೆ ಲೋಪ ಬಾರದ ರೀತಿಯಲ್ಲಿ) ಒಂದೇ ಪದವನ್ನಾಗಿ ಮಾಡುವ ಪ್ರಕ್ರಿಯೆಯನ್ನು 'ಸಮಾಸ' ರಚನೆ ಎಂದು ಕರೆಯಲಾಗುವುದು. ಹೀಗೆ ರಚನೆಗೊಳ್ಳುವ ಸಮಸ್ತಪದ ಅಥವಾ ಸಮಾಸದ ಮೊದಲ ಪದವು ಪೂರ್ವಪದವೆಂತಲೂ ಎರಡನೆಯ ಪದವು ಉತ್ತರ ಪದವೆಂತಲೂ ಕರೆಯಲ್ಪಡುತ್ತದೆ. ಸಮಸ್ತಪದವನ್ನು ಬಿಡಿಸಿ ಬರೆಯುವುದನ್ನು 'ವಿಗ್ರಹವಾಕ್ಯ' ಎಂದು ಕರೆಯುತ್ತಾರೆ.**

ಸಮಾಸ ರಚನೆ ಮಾಡುವಾಗ ಸಂಸ್ಕೃತಪದಕ್ಕೆ ಸಂಸ್ಕೃತ ಪದವನ್ನೇ ಸೇರಿಸಬೇಕು ಹೊರತು ಸಂಸ್ಕೃತಕ್ಕೆ ಕನ್ನಡ ಅಥವಾ ಕನ್ನಡಕ್ಕೆ ಸಂಸ್ಕೃತ ಪದಗಳನ್ನು ಸೇರಿಸಬಾರದು. ಹಾಗೆ ಸೇರಿಸಿದರೆ ಅದು **'ಅರಿಸಮಾಸ'** ಎನಿಸುತ್ತದೆ. ಆದರೆ ಪೂರ್ವದ ಕವಿಗಳ ಪ್ರಯೋಗಗಳಲ್ಲಿ, ಬಿರುದಾವಳಿಗಳಲ್ಲಿ, ಗಮಕ ಮತ್ತು ಕ್ರಿಯಾ ಸಮಾಸಗಳಲ್ಲಿ ಮಾಡಿದ್ದರೆ ದೋಷವಿಲ್ಲ.



ಸಮಾಸಗಳಲ್ಲಿ ಉತ್ತರಪದಅರ್ಥಪ್ರಧಾನ ಸಮಾಸ, ಉಭಯಪದಅರ್ಥಪ್ರಧಾನ ಸಮಾಸ, ಅನ್ಯಪದ ಅರ್ಥಪ್ರಧಾನ ಸಮಾಸ ಎಂಬ ಪ್ರಭೇದಗಳಿವೆ. ಈ ಪ್ರಭೇದಗಳ ಆಧಾರದಿಂದ ಕನ್ನಡದಲ್ಲಿ ಒಟ್ಟು ಎಂಟು ವಿಧದ ಸಮಾಸಗಳು ಬಳಕೆಯಲ್ಲಿವೆ. ಇವುಗಳನ್ನು **ತತ್ಪುರುಷ, ಕರ್ಮಧಾರಯ, ದ್ವಿಗು, ಬಹುವ್ರೀಹಿ, ಅಂಶಿ, ದ್ವಂದ್ವ, ಕ್ರಿಯಾ ಮತ್ತು ಗಮಕ** ಎಂದು ಹೆಸರಿಸಲಾಗಿದೆ.

ಈ ಎಂಟೂ ಸಮಾಸಗಳನ್ನು ಹಿಂದಿನ ತರಗತಿಗಳಲ್ಲಿ ವಿವರವಾಗಿ ಅಧ್ಯಯನ ಮಾಡಲಾಗಿದೆ. ಹಾಗಾಗಿ ಇಲ್ಲಿ ಉದಾಹರಣೆಗಳೊಂದಿಗೆ ನೆನಪಿಸಿಕೊಳ್ಳೋಣ.

ತತ್ಪುರುಷ ಸಮಾಸ : ಬೆಟ್ಟದ + ತಾವರೆ = ಬೆಟ್ಟದಾವರೆ

ತಲೆಯಲ್ಲಿ + ನೋವು = ತಲೆನೋವು

ಕರ್ಮಧಾರಯ ಸಮಾಸ: ಇನಿದು + ಮಾವು = ಇಮ್ಮಾವು

ಮೆಲ್ಲಿತು + ಮಾತು = ಮೆಲ್ವಾತು

ಹೊಸದು + ಕನ್ನಡ = ಹೊಸಗನ್ನಡ

ದ್ವಿಗುಸಮಾಸ : ಮೂರು + ಗಾವುದ = ಮೂಗಾವುದ

ಮೂರು + ಕಣ್ಣು = ಮುಕ್ಕಣ್ಣು

ಸಪ್ತಗಳಾದ + ಸ್ವರಗಳು = ಸಪ್ತಸ್ವರಗಳು

**ಬಹುವ್ರೀಹಿಸಮಾಸ :** ಹಣೆಯಲ್ಲಿ ಕಣ್ಣು ಉಳ್ಳವನು ಆವನೋ ಅವನು – ಹಣೆಗಣ್ಣ – ಶಿವ.

ಮೂರು ಕಣ್ಣು ಉಳ್ಳವನು ಆವನೋ ಅವನು – ಮುಕ್ಕಣ್ಣ – ಶಿವ.

ಚಕ್ರವು ಪಾಣಿಯಲ್ಲಿ ಆವನಿಗೋ ಅವನು – ಚಕ್ರಪಾಣಿ – ವಿಷ್ಣು

**ಅಂಶಿಸಮಾಸ :** ಕೈಯ + ಅಡಿ = ಅಂಗೈ

ತಲೆಯ + ಹಿಂದು = ಹಿಂದಲೆ

ಕಣ್ಣ + ಕಡೆ = ಕಡೆಗಣ್ಣು

**ದ್ವಂದ್ವಸಮಾಸ :** ಗಿರಿಯೂ + ವನವೂ + ದುರ್ಗವೂ = ಗಿರಿವನದುರ್ಗಗಳು

ಕರಿಯೂ + ತುರಗವೂ + ರಥವೂ = ಕರಿತುರಗರಥ

**ಕ್ರಿಯಾಸಮಾಸ :** ಮೈಯನ್ನು + ಮುಚ್ಚು = ಮೈಮುಚ್ಚು

ಕಣ್ಣಂ + ತೆರೆ = ಕಣ್ದೆರೆ

ಕಣ್ಣಿನಿಂದ + ಕೆಡು = ಕಂಗೆಡು

**ಗಮಕಸಮಾಸ :** ಅದು + ಕಲ್ಲು = ಆಕಲ್ಲು

ಇದು + ಬೆಕ್ಕು = ಈಬೆಕ್ಕು

ನೆಯ್ದುದು + ವಸ್ತ್ರ = ನೆಯ್ದುವಸ್ತ್ರ



## ಭಾಷಾ ಚಟುವಟಿಕೆ

೧. **ಕೊಟ್ಟಿರುವ ಪದಗಳ ತತ್ಸಮ–ತದ್ಭವ ಬರೆಯಿರಿ.**

ವಂಶ, ಸ್ಥಾನ, ಯಶ, ಪಟ್ಟಣ, ಕಾರ್ಯ

೨. **ನೀಡಿರುವ ಪದಗಳಲ್ಲಿ ಅನ್ಯದೇಶ್ಯ ಪದಗಳನ್ನು ಆರಿಸಿ ಬರೆಯಿರಿ.**

ಡಿಪ್ಲೊಮಾ, ಅಜಮಾಯಿಷಿ, ದಿವಾನ, ಪ್ರೌಢ, ಶಿಕ್ಷಣ, ನಡೆಸು, ಸೋಪು, ಕಾರ್ಖಾನೆ, ಕಾಗದ, ಕಚೇರಿ

❋ ❋ ❋ ❋ ❋

## ಗದ್ಯಪಾಠ – ೦೬

# ಎದೆಗೆ ಬಿದ್ದ ಅಕ್ಷರ

**– ದೇವನೂರ ಮಹಾದೇವ**

**ಮುನ್ನುಯಾರಿ :** ಶಿಕ್ಷಣ, ವಿಜ್ಞಾನ, ನಗರೀಕರಣದ ಪ್ರಭಾವದಿಂದ ವೈಚಾರಿಕ ಚಿಂತನೆ ತೀವ್ರವಾಯಿತು. ಅಸಮಾನತೆಯ ವಿರುದ್ಧ ದನಿಯೆತ್ತುವ ಪರಿಸ್ಥಿತಿ ನಿರ್ಮಾಣವಾಯಿತು. ಸಾಮಾಜಿಕ ಸಾಮರಸ್ಯಕ್ಕೆ ಮೊದಲನೆಯ ಅಡ್ಡಿ ಮೌಢ್ಯವೆ. ಮೌಢ್ಯಮರೆಯಾಗುವವರೆಗೆ ಸಾಮರಸ್ಯವೆಂಬುದು ಕನಸಾಗಿಯೇ ಉಳಿಯುತ್ತದೆ. ಮೌಢ್ಯದ ಗೋಡೆಯನ್ನೊಡೆದು ವಿಶ್ವಕ್ಕೆ ಬೆಳಕಾದ ಬುದ್ಧ, ಬಸವಣ್ಣ, ಅಂಬೇಡ್ಕರ್ ಮೊದಲಾದ ಸಮಾಜ ಸುಧಾರಕರ ಸದ್ಚಿಂತನೆಗಳ ಫಲವಾಗಿ ಸಮತೆಯನ್ನು ಮೈಗೂಡಿಸಿಕೊಳ್ಳುವುದು ಅನಿವಾರ್ಯ. ದ್ವೇಷ ಅಸೂಯೆಗಳನ್ನು ತೊರೆದು ಸಮಷ್ಟಿಯ ಒಳಿತಿಗಾಗಿ ಸಾಮರಸ್ಯದ ನೆಲೆಯಲ್ಲಿ ಬದುಕನ್ನು ರೂಪಿಸಿಕೊಂಡಲ್ಲಿ ಸಮಾಜದ ಸ್ವಾಸ್ಥ್ಯ ಸ್ಥಿರಗೊಳ್ಳಬಹುದೆಂಬುದು ಇಲ್ಲಿನ ಆಶಯ.

### ಅರ್ಥೈಸಿ ಓದಿ

**ಆವಾಹಿಸು ಆಂದೋಲನ ಕಾಲವಶ ಆರ್ತತೆ ಕ್ಷೋಭೆ**
**ಮೂರ್ಛಾವಸ್ಥೆ ಮಹೋನ್ನತ ಚಾವಣಿ ಜಾಗತೀಕರಣ**

ಭೂಮಿಗೆ ಬಿದ್ದ ಬೀಜ
ಎದೆಗೆ ಬಿದ್ದ ಅಕ್ಷರ
ಇಂದಲ್ಲ ನಾಳೆ ಫಲ ಕೊಡುವುದು



ಕವಿ ಸಿದ್ಧಲಿಂಗಯ್ಯ ಒಮ್ಮೆ ನನಗೆ ಹೇಳಿದ ಕತೆಯಲ್ಲಿ **ಮನೆಮಂಚಮ್ಮ** ಎಂಬ ಗ್ರಾಮದೇವತೆಯ ಒಳಗಿಂದ ನನ್ನ ದೇವರು ಒಡಮೂಡುತ್ತದೆ– ಒಂದ್ಸಲ ಒಂದು ಗ್ರಾಮದ ಜನರೆಲ್ಲಾ ಸೇರಿ ತಮ್ಮ ದೇವತೆಗೆ ಗುಡಿಕಟ್ಟಲು ಆರಂಭಿಸುತ್ತಾರೆ. ಹೀಗೆ ಕಟ್ತಾ ಚಾವಣಿ ಮಟ್ಟಕ್ಕೆ ಆ ಗುಡಿ ಬಂದಾಗ ಒಬ್ಬನ ಮೈಮೇಲೆ ಆ ದೇವತೆ ಮಂಚಮ್ಮ ಆವಾಹಿಸಿಕೊಂಡು "ನಿಲ್ಸಿ ನನ್ ಮಕ್ಕಳಾ" ಎಂದು ಅಬ್ಬರ ಮಾಡುತ್ತಾಳೆ. ಆ ಅಬ್ಬರಕ್ಕೆ ಜನ ತಮ್ಮ ಕೆಲ್ಸ ನಿಲ್ಸಿ ಕಕ್ಕಾಬಿಕ್ಕಿಯಾಗಿ ನೋಡುತ್ತಿರಲು ಆ ದೇವತೆ ಹಾಗೂ ಆ ಜನರ ನಡುವೆ ಮಾತುಕತೆ ನಡೆಯುತ್ತದೆ.

'ಏನ್ರಯ್ಯಾ ಏನ್ ಮಾಡ್ತಾ ಇದ್ದೀರಿ?'

'ನಿನಗೊಂದು ಗುಡಿಮನೆ ಕಟ್ತಾ ಇದ್ದೀವಿ ತಾಯಿ'

'ಓಹೋ, ನನಗೇ ಗುಡಿಮನೆ ಕಟ್ತಾ ಇದ್ದೀರೋ ? ಹಾಗಾದರೆ ನಿಮಗೆಲ್ಲಾ ಮನೆ ಉಂಟಾ ನನ್ನ ಮಕ್ಕಳಾ?'

'ನನಗಿಲ್ಲ ತಾಯಿ'– ಅಲ್ಲೊಬ್ಬ ಹೇಳ್ತಾನೆ.

'ಹಾಗಾದರೆ ಎಲ್ಲರಿಗೂ ಮನೆ ಆಗುವವರೆಗೆ ನನಗೂ ಮನೆ ಬೇಡ'

–ಹೀಗೆಂದ ಮಂಚಮ್ಮದೇವಿ ಮನೆಮಂಚಮ್ಮನಾಗುತ್ತಾಳೆ!

ಚಾವಣಿ ಇಲ್ಲದ ಗುಡಿಯಲ್ಲಿ ತಾಯಿ ಮನೆಮಂಚಮ್ಮ ಇಂದು ಪೂಜಿತಳಾಗುತ್ತಿದ್ದಾಳೆ. ಈ ರೀತಿ ಚಾವಣಿ ಇಲ್ಲದ ಗುಡಿಯಲ್ಲಿ ಕಾರುಣ್ಯ ಸಮತೆಯ ಬುದ್ಧನನ್ನು ಇಟ್ಟರೆ ಅದೇ ನನ್ನ ದೇವರಾಗುತ್ತದೆ.

* * * *

ಬುದ್ಧನಂತೂ ಎಲ್ಲ ಸಹಸ್ರಮಾನವನ್ನೂ ಮೀರಿದವನು.

ಇದಾದ ಮೇಲೆ ನನಗೆ ಈ ಸಹಸ್ರಮಾನದಲ್ಲಿ ಕಾಣುವುದು ಹನ್ನೆರಡನೆಯ ಶತಮಾನದ ವಚನ ಆಂದೋಲನದ ಆ ಇಪ್ಪತ್ತೈದು ವರ್ಷಗಳು. ಹುಡುಕಿದರೂ ಜಗತ್ತಿನಲ್ಲೇ ಕರ್ನಾಟಕದ ಈ ಮಾದರಿ ಬಹುಶ: ಎಲ್ಲೂ ಸಿಗುವುದಿಲ್ಲವೇನೋ! ಈ ವಚನಧರ್ಮವನ್ನು ಜಾತಿಯ ಬಚ್ಚಲಿನಿಂದ ಮೇಲೆತ್ತಿ ರಕ್ಷಿಸಿದರೆ ಜಗತ್ತಿಗೇ ಇದು ಬೆಳಕಾಗಬಹುದೇನೋ. ಇದು ಜಾತಿಯಾದರೆ ಕೆಟ್ಟ ಜಾತಿ; ಧರ್ಮವಾದರೆ ಮಹೋನ್ನತ ಧರ್ಮ.

ಆಮೇಲೆ ಪರಮಹಂಸ. ಒಂದು ದೇಹ ಮನಸ್ಸು ಅದೆಷ್ಟು ಮಾಧ್ಯಮವಾಗಬಹುದೋ ಅದಷ್ಟೂ ಒಂದೇ ದೇಹದಲ್ಲಿ ಸಂಭವಿಸಿದ ಒಂದು ಉದಾಹರಣೆ ಪರಮಹಂಸ. ಯಾವುದನ್ನೂ ಕೊಲ್ಲದೆ, ಒಳಿತುಗಳನ್ನೆ ಕೂಡಿಸುತ್ತ ಕೂಡಿಸುತ್ತಾ ಹೋದ ಪರಮಹಂಸ ಹಾಗೂ ನಾನು ಹುಟ್ಟುವ ಮೊದಲು ಕಾಲವಶವಾದ ಗಾಂಧಿ– ಒಂದು ಜೀವಿತದಲ್ಲಿ ಇರಬಹುದಾದ ಗಳಿಗೆ ಗಳಿಗೆಗಳನ್ನು ಬದುಕುತ್ತಾ ಗಳಿಗೆಯಿಂದ ಗಳಿಗೆಗೆ ಎಡವುತ್ತ ಸತ್ಯ ಸಮಾನತೆಗಳ ಕಡೆಗೆ ನಡೆಯುತ್ತ ಸಮಷ್ಟಿಯೇ ಆದ ಗಾಂಧಿ ಜೊತೆಗೆ ಅಂಬೇಡ್ಕರರ ಆರ್ತತೆ ಹಾಗೂ ಋುಷಿ ಐನ್‌ಸ್ಟೈನ್.

ಇಷ್ಟಾದ ಮೇಲೆ ವ್ಯಾಸ ಕ್ರಿಸ್ತಪೂರ್ವವೋ ಕ್ರಿಸ್ತಶಕವೋ ನನಗೆ ತಿಳಿಯದು. ಅವನು ಎಲ್ಲಾ ಶತಮಾನಗಳ ಜತೆ ಬೆಳೆಯುತ್ತಲೇ ಇರುವವನು. ಟಾಲ್‌ಸ್ಟಾಯ್, ಶೇಕ್ಸ್‌ಪಿಯರ್ ಹಾಗೂ ನಮ್ಮ ನೆಲದ ಪಂಪ, ಕುಮಾರವ್ಯಾಸ, ಕವಿ ಬೇಂದ್ರೆಯವರ ಒಂದಿಷ್ಟು ಕವಿತೆ, ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಪುಣ್ಯದಂತೆ ನನಗೆ ಕಾಣಿಸುತ್ತವೆ.

* * * *

ಬುದ್ಧನ ಕಾರುಣ್ಯ ನನ್ನ ಮನದೊಳಗೆ ಕೂತ ಬಗೆಯನ್ನು ಒಂದು ಉದಾಹರಣೆಯಿಂದ ಹೇಳಲು ಪ್ರಯತ್ನಿಸುವೆ.

ಇತ್ತೀಚೆಗೆ ಶಿವಮೊಗ್ಗದ ಡಾ. ಅಶೋಕ ಪೈ (ಮನೋವೈದ್ಯರು) ಅವರು ಮೈಸೂರಿಗೆ ಬಂದಿದ್ದರು. ಅವರು ಮನಸ್ಸಿನ ಬಗ್ಗೆ ನಡೆದಿರುವ ಒಂದು ಸಂಶೋಧನಾ ಸತ್ಯವನ್ನು ಹೇಳಿದರು. ಏನೆಂದರೆ– ಕೆಲವು ಜನ ಒಂದು ಕೊಠಡಿಯಲ್ಲಿ ಕುಳಿತು ಟೆಲಿವಿಷನ್ ನೋಡುತ್ತಿದ್ದಾರೆ ಎಂದಿಟ್ಟುಕೊಳ್ಳೋಣ. ಇನ್ನೊಂದಿಷ್ಟು ಜನ ಇದರ ಅರಿವಿಲ್ಲದೆ ಇನ್ನೊಂದು ಪಕ್ಕದ ಕೊಠಡಿಯಲ್ಲಿ ಏನೋ ಮಾತುಕತೆಯಾಡುತ್ತ ತಮ್ಮಷ್ಟಕ್ಕೆ ತಾವಿರುವರು ಎಂದಿಟ್ಟುಕೊಳ್ಳೋಣ. ಆಗ ಟೆಲಿವಿಷನ್‌ನಲ್ಲಿ ಯಾವುದಾದರೂ ಕೊಲೆ ದೃಶ್ಯ ಬಂದಾಗ ಇಲ್ಲಿ ಇದನ್ನು ನೋಡುತ್ತಿದ್ದವರ ದು:ಖದ ಭಾವನೆಯು ಇದನ್ನು ನೋಡದೆ ಇರುವ ಪಕ್ಕದ ಕೊಠಡಿಯಲ್ಲಿ ಇರುವವರ ಮನಸ್ಸಿಗೂ ಮುಟ್ಟಿ ಅವರ ಮನಸ್ಸು ಸ್ವಲ್ಪಮಟ್ಟಿಗೆ ದುಗುಡಗೊಳ್ಳುತ್ತದಂತೆ. ಅದೇ ಟೆಲಿವಿಷನ್‌ನಲ್ಲಿ ಯಾವುದಾದರೂ ನೃತ್ಯ ದೃಶ್ಯ ಬಂದಾಗ ಅದನ್ನು ನೋಡುತ್ತಿದ್ದವರ ಖುಷಿ ಭಾವನೆಯು ಪಕ್ಕದ ಕೊಠಡಿಯಲ್ಲಿ ಇದನ್ನು ನೋಡದ ತಮ್ಮಷ್ಟಕ್ಕೆ ತಾವೇ ಇದ್ದವರ ಮನಸ್ಸಿನ ಮೇಲೂ ಪರಿಣಾಮ ಮಾಡಿ ಸ್ವಲ್ಪ ಮಟ್ಟಿಗೆ ಸಂತೋಷದ ಭಾವನೆ ಉಂಟಾಗುವುದಂತೆ.

ಈ ನಿಜ ಏನನ್ನು ಹೇಳುತ್ತದೆ? ಯಾವ ಜೀವಿಯೂ ತನ್ನಷ್ಟಕ್ಕೆ ತಾನಿಲ್ಲ ಎಂದು ಹೇಳುತ್ತದೆ. ಯಾವುದೇ ಒಂದು ಜೀವಿಗೆ ಆಗುವ ದು:ಖ ದುಮ್ಮಾನ ಪರಿಸರದಲ್ಲಿ ಉಸಿರಾಡುತ್ತ ಎಲ್ಲಾ ಜೀವಿಗಳಲ್ಲೂ ಕಂಪನ ಉಂಟು ಮಾಡುತ್ತಿರುತ್ತದೇನೊ. ಈ ಅನುಕಂಪನ ಇಡೀ ಜೀವಸಂಕುಲವನ್ನೇ ಒಂದು ಎಂದು ಹೇಳುತ್ತದೆ.

ಬುದ್ಧನ ಕಾರುಣ್ಯ ಇಲ್ಲಿಂದಲೇ ಮೂಡಿರಬಹುದು.

ಕೊಲೆ ಸುಲಿಗೆ ದ್ವೇಷ ಅಸೂಯೆಗಳಿಂದ ಕ್ಷೋಭೆಗೊಂಡು ನರಳುತ್ತಿರುವ ಜಗತ್ತು- ಅದು ಘಾಸಿಗೊಳಿಸುವುದು- ತನ್ನ ಆಳದ ಒಳ ಸಮಷ್ಟಿ ಮನಸ್ಸನ್ನೆ. ಈ ಸಮಷ್ಟಿ ಮನಸ್ಸಲ್ಲಿ ಎಲ್ಲರೂ ಇರುತ್ತಾರೆ.

ನಾವು ಮನುಷ್ಯರು ನಮ್ಮೊಳಗೆ ಮೂರ್ಛಾವಸ್ಥೆಯಲ್ಲಿರುವ ಕಾರುಣ್ಯವನ್ನು ಎಚ್ಚರಗೊಳಿಸಬೇಕಾಗಿದೆ.

ಈ ಎಳೆ ಹಿಡಿದು ಜಾಗತೀಕರಣವನ್ನೂ ರೂಪಿಸಬೇಕಾಗಿದೆ. ಆಗ ಮಾತ್ರವೇ ಅದು ಜಾಗತೀಕರಣ.

## ಕರ್ತೃ-ಭಾವ-ಆಕರ



ದೇವನೂರ ಮಹಾದೇವ (ಕ್ರಿ.ಶ.೧೯೪೮) ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕು ದೇವನೂರಿನವರು. ಮೈಸೂರಿನ ಭಾರತೀಯ ಭಾಷಾಸಂಸ್ಥಾನದಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ ಇವರು ಬಂಡಾಯ ಮತ್ತು ದಲಿತ ಸಾಹಿತ್ಯದ ಪ್ರಮುಖರಲ್ಲಿ ಒಬ್ಬರಾಗಿದ್ದಾರೆ. ಆಡುಮಾತಿನ ಧ್ವನಿಶಕ್ತಿಯನ್ನು ಎತ್ತರಿಸಿದ ಶಬ್ದಶಿಲ್ಪಿ ಇವರು.

**ದ್ಯಾವನೂರು, ಒಡಲಾಳ, ಗಾಂಧಿ ಮತ್ತು ಮಾವೊ, ನಂಬಿಕೆಯನೆಂಟ, ನೋಡು ಮತ್ತು ಕೂಡು, ಎದೆಗೆ ಬಿದ್ದ ಅಕ್ಷರ** ಶ್ರೀಯುತರ ಪ್ರಮುಖ ಕೃತಿಗಳು. ಇವರ **ಕುಸುಮಬಾಲೆ** ಕಾದಂಬರಿಗೆ ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ, **ಒಡಲಾಳ** ಕೃತಿಗೆ ಭಾರತೀಯ ಭಾಷಾ ಪರಿಷತ್ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳು ಲಭಿಸಿವೆ.



[ಮೈಸೂರು ವಿಶ್ವವಿದ್ಯಾನಿಲಯದ ಆಧುನಿಕ ಬರಹಗಾರರು-ಆಧಾರ]

ಭಾರತದಂಥ ರಾಷ್ಟ್ರದಲ್ಲಿ ಜಾತೀಯತೆ. ಗ್ರಾಮೀಣ ಜೀವನ, ಬಡತನ, ಮೌಢ್ಯದಿಂದಾಗಿ ಮೇಲು-ಕೀಳು ಭಾವನೆ ಪ್ರಾಚೀನಕಾಲದಿಂದಲೂ ಬೆಳೆದು ಬಂದಿದೆ. ಅದರ ವಿರುದ್ಧ ಹೋರಾಟಗಳೂ ನಡೆದಿವೆ. ಕಾರುಣ್ಯ, ಸಮಾನತೆ, ಅಹಿಂಸೆ ಎಂಬ ಮೌಲ್ಯಗಳ ಮೂಲಕ ದೇವರನ್ನು ಕಾಣಬೇಕಾದ ಅನಿವಾರ್ಯತೆ ಇದೆ. ಆಧುನಿಕ ಯುಗದಲ್ಲಿ ಉಂಟಾಗಿರುವ ಬದಲಾವಣೆಗಳು ಬಹಿರಂಗ ರೂಪದವು. ಅಂತರಂಗದ ಹೊಂದಾಣಿಕೆಯಿಂದ ಮಾತ್ರ ಸಮಾನತೆ, ಸಾಮರಸ್ಯ ಸಾಧ್ಯ, ಅದಕ್ಕಾಗಿ ಹೋರಾಡಿದ ಮಹನೀಯರ ದಾರಿಯಲ್ಲಿ ಜಾಗತೀಕರಣವನ್ನು ರೂಪಿಸಬೇಕಾಗಿದೆ.

ದೇವನೂರ ಮಹಾದೇವ ವಿರಚಿತ **'ಎದೆಗೆ ಬಿದ್ದ ಅಕ್ಷರ'** ಎಂಬ ವೈಚಾರಿಕ ಬಿಡಿಲೇಖನಗಳ ಸಂಕಲನದಿಂದ ಈ ಗದ್ಯಭಾಗವನ್ನು ಆಯ್ಕೆಮಾಡಲಾಗಿದೆ.

## ಪದ-ಅರ್ಥ

ಚಿಂತಕ-ಹೊಸ ರೀತಿಯ ವಿಚಾರಗಳನ್ನು ಪ್ರತಿಪಾದಿಸುವವನು, ಅಂದಾಜಿಸು-ಊಹೆ ಮಾಡು, ಆವಾಹಿಸು-ಮೈಮೇಲೆ ಬರುವಂತೆ ಮಾಡಿಕೊ, ಒಡಮೂಡು-ಹುಟ್ಟು, ಗುಡಿಮನೆ-ಚಿಕ್ಕ ದೇವಸ್ಥಾನ,

ಕ್ಷೋಭೆ– ತಳಮಳ, ಆರ್ತತೆ – ಬಯಕೆ.

## ಪಠ್ಯಾಧಾರ ಟಿಪ್ಪಣಿ

**ವ್ಯಾಸ** : ಪರಾಶರನ ಮಗನಾದ ಕೃಷ್ಣದ್ವೈಪಾಯನ. ಸಂಸ್ಕೃತದಲ್ಲಿ 'ಮಹಾಭಾರತ' ಗ್ರಂಥವನ್ನು ರಚಿಸಿದವನು. ವೇದಗಳನ್ನು ವಿಂಗಡಿಸಿದ್ದರಿಂದ ವೇದವ್ಯಾಸ ಎಂಬ ಹೆಸರು ಬಂತು.

**ಬುದ್ಧ** : ಶುದ್ಧೋದನನ ಮಗ ಸಿದ್ಧಾರ್ಥ. ಇವನಿಗೆ ಬೋಧಿವೃಕ್ಷದಡಿ ಜ್ಞಾನೋದಯವಾಯಿತು. ಜಗತ್ತಿನ ಮಹಾನ್ ಚಿಂತಕರಲ್ಲಿ ಒಬ್ಬ. ಇವನು ಬೌದ್ಧಧರ್ಮದ ಸ್ಥಾಪಕ.

**ಷೇಕ್ಸ್‌ಪಿಯರ್** : ಜಗತ್ತಿನ ಮಹೋನ್ನತ ನಾಟಕಕಾರರಲ್ಲಿ ಒಬ್ಬ. ಇಂಗ್ಲಿಷ್ ನಾಟಕಕಾರ. ಇವನ ಹ್ಯಾಮ್ಲೆಟ್, ಮ್ಯಾಕ್‌ಬೆತ್, ಜೂಲಿಯಸ್ ಸೀಸರ್, ಒಥೆಲೊ ಮುಂತಾದ ದುರಂತ ನಾಟಕಗಳು ಜಗತ್ಪ್ರಸಿದ್ಧವಾಗಿವೆ.

**ಟಾಲ್‌ಸ್ಟಾಯ್** : ಕಳೆದ ಶತಮಾನದ ರಷ್ಯಾ ದೇಶದ ಮಹಾನ್ ಮೇಧಾವಿ. ಇವನ ಕತೆ ಕಾದಂಬರಿಗಳು ಪ್ರಸಿದ್ಧವಾಗಿವೆ. 'ಯುದ್ಧ ಮತ್ತು ಶಾಂತಿ' ಇವನ ಮೇರುಕೃತಿ.

**ಐನ್‌ಸ್ಟೈನ್** : ಒಬ್ಬ ಪ್ರಸಿದ್ಧ ವಿಜ್ಞಾನಿ. ಇವನ ' ಸಾಪೇಕ್ಷ ಸಿದ್ಧಾಂತ' ಎನ್ನುವ ತತ್ತ್ವವು ಜಗತ್ತಿನ ಮುಂದಿನ ಚಿಂತಕರ ಮೇಲೆ ಪ್ರಭಾವವನ್ನುಂಟು ಮಾಡಿತು. ಇವನು ಜ್ಞಾನದ ದೃಷ್ಟಿಯಿಂದ ಋಷಿಸದೃಶನಾದ ಕಾರಣ ಋಷಿ ಐನ್‌ಸ್ಟೈನ್ ಎಂಬ ಪದಪ್ರಯೋಗ ಮಾಡಲಾಗಿದೆ.



## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ:**

೧. ಮನೆಮಂಚಮ್ಮ ಯಾರು?
೨. ಮನೆ ಮಂಚಮ್ಮನ ಕತೆ ಹೇಳಿದ ಕವಿ ಯಾರು?
೩. 'ಮಲೆಗಳಲ್ಲಿ ಮದುಮಗಳು' ಯಾರು ಬರೆದ ಕಾದಂಬರಿ?
೪. ಅಶೋಕ ಪೈ ಅವರ ವೃತ್ತಿ ಯಾವುದು?
೫. ದೇವನೂರರ ' ನನ್ನ ದೇವರು' ಯಾರೆಂಬುದನ್ನು ಸ್ಪಷ್ಟೀಕರಿಸಿ.

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ಅಶೋಕ ಪೈ ಹೇಳಿದ ಸಂಶೋಧನಾ ಸತ್ಯವೇನು?
೨. 'ವಚನಧರ್ಮ'ದ ಬಗೆಗೆ ದೇವನೂರರ ಅಭಿಪ್ರಾಯ ಏನು?
೩. ಪರಮಹಂಸರ ವ್ಯಕ್ತಿತ್ವದ ವೈಶಿಷ್ಟ್ಯ ಎಂಥದ್ದು?
೪. ಇಂದಲ್ಲ–ನಾಳೆ ಫಲ ಕೊಡುವ ಅಂಶಗಳಾವುವು?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಸತ್ಯ ಮತ್ತು ಸಮಾನತೆಯನ್ನು ಕುರಿತ ನಿಮ್ಮ ಅನಿಸಿಕೆಗಳೇನು?
೨. ಕವಿ ಸಿದ್ಧಲಿಂಗಯ್ಯ ಹೇಳಿದ ಕತೆಯನ್ನು ಬರೆಯಿರಿ.

೩. ಸತ್ಯ–ಧರ್ಮ–ಸಮಾನತೆಯ ಬಗೆಗೆ ದೇವನೂರರು ಕೊಡುವ ದೃಷ್ಟಾಂತಗಳಾವುವು?

**ಈ. ಸಂದರ್ಭದೊಂದಿಗೆ ಸ್ವಾರಸ್ಯ ಬರೆಯಿರಿ.**

೧. "ಏನ್ರಯ್ಯಾ ಏನ್ ಮಾಡ್ತಾ ಇದ್ದೀರಿ?"

೨. "ಹಾಗಾದರೆ ಎಲ್ಲರಿಗೂ ಮನೆ ಆಗುವವರೆಗೆ ನನಗೂ ಮನೆ ಬೇಡ."

೩. "ಯಾವ ಜೀವಿಯೂ ತನ್ನಷ್ಟಕ್ಕೆ ತಾನಿಲ್ಲ."

೪. "ನಾವು ಮನುಷ್ಯರು."

೫. "ಈ ಸಮಷ್ಟಿ ಮನಸ್ಸಲ್ಲಿ ಎಲ್ಲರೂ ಇರುತ್ತಾರೆ."

**ಉ. ಹೊಂದಿಸಿ ಬರೆಯಿರಿ.**

| ಅ | | ಬ |
|---|---|---|
| ೧. ಕುವೆಂಪು | – | ಮಹಾಭಾರತ |
| ೨. ವಚನ ಆಂದೋಳನ | – | ಮಹಾದೇವ |
| ೩. ದೇವನೂರ | – | ೧೨ ನೆಯ ಶತಮಾನ |
| ೪. ವ್ಯಾಸ | – | ಮಲೆಗಳಲ್ಲಿ ಮದುಮಗಳು. |
| | – | ರಾಮಾಯಣ |

## ಸೈದ್ಧಾಂತಿಕ ಭಾಷಾಭ್ಯಾಸ

## ತದ್ಧಿತಾಂತಗಳು



**ಈ ವಾಕ್ಯಗಳನ್ನು ಗಮನಿಸಿ.**

೧. ಮೋಸವನ್ನು ಮಾಡುವವನು ಇದ್ದಾನೆ.

೨. ಕನ್ನಡವನ್ನು ಬಲ್ಲವನು ಬಂದನು.

ಮೊದಲ ವಾಕ್ಯದಲ್ಲಿ ಇರುವ **ಮೋಸವನ್ನು** ಎಂಬ ಪದದ ಮುಂದೆ **ಮಾಡುವವನು** ಎಂಬ ಅರ್ಥದಲ್ಲಿ **ಗಾರ** ಎಂಬ ಪ್ರತ್ಯಯವನ್ನು ಸೇರಿಸಿ **ಮೋಸಗಾರ** ಎಂಬ ಪದವನ್ನು ಮಾಡಬಹುದು.

ಅಂದರೆ **ಮೋಸವನ್ನು** + **ಗಾರ** = **ಮೋಸಗಾರ** ಎಂಬ ರೀತಿಯಲ್ಲಿ ಪದರಚನೆಯಾಗುತ್ತದೆ. ಒಂದು ಪ್ರಕೃತಿ ಪದಕ್ಕೆ ಎರಡು ಪ್ರತ್ಯಯವನ್ನು ಸೇರಿಸುವ ಕ್ರಮವಿಲ್ಲ. ಹಾಗಾಗಿ **ಮೋಸ** ಎಂಬ ಪ್ರಕೃತಿ ಪದದ ಜೊತೆಗೆ ಇದ್ದ **ಅನ್ನು** ಎಂಬ ಪ್ರತ್ಯಯವನ್ನು ತೆಗೆದು **ಗಾರ** ಎಂಬ ತದ್ಧಿತ ಪ್ರತ್ಯಯವನ್ನು ಮಾತ್ರ ಉಳಿಸಿಕೊಂಡು **ಮೋಸಗಾರ** ಎಂಬ ತದ್ಧಿತಾಂತ ಪದರಚನೆ ಮಾಡಲಾಗುವುದು.

ಎರಡನೆಯ ವಾಕ್ಯದಲ್ಲಿ ಕೂಡಾ ಇದೇ ರೀತಿಯ ಪ್ರಕ್ರಿಯೆ ನಡೆದು **ಕನ್ನಡವನ್ನು** (ಪ್ರಕೃತಿಪದ) + ಇಗ (ತದ್ಧಿತ ಪ್ರತ್ಯಯ) = **ಕನ್ನಡಿಗ** ಎಂಬ ತದ್ಧಿತಾಂತ ಪದರಚನೆಯಾಗಿದೆ.

**ತದ್ಧಿತಾಂತ : ನಾಮಪದಗಳ ಮೇಲೆ ಬೇರೆಬೇರೆ ಅರ್ಥಗಳಲ್ಲಿ ಗಾರ, ಕಾರ, ಇಗ, ಆಡಿಗ, ವಂತ, ಇಕ ಮುಂತಾದ ತದ್ಧಿತ ಪ್ರತ್ಯಯಗಳು ಸೇರಿ ತದ್ಧಿತಾಂತಗಳಾಗುತ್ತವೆ.**

ಹೀಗೆ ರಚನೆಯಾಗುವ ತದ್ಧಿತ ಪ್ರತ್ಯಯಗಳಲ್ಲಿ **ತದ್ಧಿತಾಂತನಾಮ, ತದ್ಧಿತಾಂತಭಾವನಾಮ** ಮತ್ತು

**ತದ್ಧಿತಾಂತ ಅವ್ಯಯಗಳೆಂದು ಮೂರು** ವಿಭಾಗಗಳಿವೆ.

**ತದ್ಧಿತಾಂತ ನಾಮಗಳು :** ನಾಮಪದಗಳಿಗೆ ತದ್ಧಿತ ಪ್ರತ್ಯಯಗಳು ಸೇರಿ ಆಗುವ ಪದಗಳೇ **ತದ್ಧಿತಾಂತನಾಮಗಳು.**

**ಉದಾ:– (ಪುಲ್ಲಿಂಗರೂಪದಲ್ಲಿ)**

| | | | | |
|---|---|---|---|---|
| ಬಳೆಯನ್ನು | + | ಮಾರುವವನು | = | ಬಳೆಗಾರ |
| ಕೋಲನ್ನು | + | ಹಿಡಿಯುವವನು | = | ಕೋಲುಕಾರ |
| ಕನ್ನಡವನ್ನು | + | ಬಲ್ಲವನು | = | ಕನ್ನಡಿಗ |
| ಸಿರಿಯನ್ನು | + | ಉಳ್ಳವನು | = | ಸಿರಿವಂತ |

**(ಸ್ತ್ರೀಲಿಂಗರೂಪದಲ್ಲಿ)**

| | | | | |
|---|---|---|---|---|
| ಬಳೆಯನ್ನು | + | ಮಾರುವವಳು | = | ಬಳೆಗಾರ್ತಿ |
| ಕೋಲನ್ನು | + | ಹಿಡಿಯುವವಳು | = | ಕೋಲುಕಾರ್ತಿ |
| ಕನ್ನಡವನ್ನು | + | ಬಲ್ಲವಳು | = | ಕನ್ನಡಿತಿ |
| ಸಿರಿಯನ್ನು | + | ಉಳ್ಳವಳು | = | ಸಿರಿವಂತೆ |

ಹೀಗೆ—

**ಇತಿ, ಇತ್ತಿ, ಗಿತ್ತಿ, ತಿ, ಇತ್ಯಾದಿ ಸ್ತ್ರೀಲಿಂಗ ರೂಪದ ತದ್ಧಿತ ಪ್ರತ್ಯಯಗಳು ಸೇರಿ ಸ್ತ್ರೀಲಿಂಗದ ತದ್ಧಿತಾಂತಗಳಾಗುತ್ತವೆ.**

**ತದ್ಧಿತಾಂತ ಭಾವನಾಮಗಳು :**

ಈ ವಾಕ್ಯಗಳನ್ನು ಗಮನಿಸಿ.

– ಬಡತನ, ಸಿರಿತನಗಳು ಶಾಶ್ವತವಲ್ಲ

– ನಮಗೆ ಅದೊಂದು ಹಿರಿಮೆ.

ಈ ವಾಕ್ಯಗಳಲ್ಲಿರುವ **ಬಡತನ, ಸಿರಿತನ, ಹಿರಿಮೆ** ಎಂಬ ಪದಗಳನ್ನು ಗಮನಿಸಿದಾಗ ಬಡವನ ಭಾವ–**ಬಡತನ** ಸಿರಿವಂತನ ಭಾವ – **ಸಿರಿತನ,** ಹಿರಿದರ ಭಾವ – ಹಿರಿಮೆ ಎಂಬುದು ತಿಳಿಯುತ್ತದೆ. ಇಲ್ಲಿರುವ **ತನ, ಮೆ** ಎಂಬ ಪದಗಳು ಭಾವಾರ್ಥದಲ್ಲಿ ಪ್ರಯೋಗವಾಗಿವೆ. ಹೀಗೆ...

**ಸಾಮಾನ್ಯವಾಗಿ ಷಷ್ಠೀ ವಿಭಕ್ತ್ಯಂತ ನಾಮಪದಗಳ ಮುಂದೆ ಭಾವಾರ್ಥದಲ್ಲಿ – ತನ,– ಇಕೆ, –ಪು, –ಮೆ ಇತ್ಯಾದಿ ತದ್ಧಿತ ಪ್ರತ್ಯಯಗಳು ಸೇರಿ ತದ್ಧಿತಾಂತ ಭಾವನಾಮಗಳೆನಿಸುವುವು.**

**ಉದಾ:–** ಜಾಣನ (ಭಾವ) ತನ – ಜಾಣತನ

ಚೆಲುವಿನ (ಭಾವ) ಇಕೆ – ಚೆಲುವಿಕೆ

ಕರಿದರ (ಭಾವ) ಪು – ಕಪ್ಪು

ಪಿರಿದರ (ಭಾವ) ಮೆ – ಪೆರ್ಮೆ

## ತದ್ಧಿತಾಂತಾವ್ಯಯ

ಈ ವಾಕ್ಯಗಳನ್ನು ಗಮನಿಸಿ.

- ಇವನು ಭೀಮನಂತೆ ಬಲಶಾಲಿ
- ಶಾಲೆಯ ತನಕ ಬನ್ನಿ
- ಆಕೆಗಿಂತ ಚಿಕ್ಕವಳು

ಈ ವಾಕ್ಯಗಳಲ್ಲಿರುವ **ಭೀಮನಂತೆ, ಶಾಲೆಯತನಕ, ಆಕೆಗಿಂತ** ಎಂಬ ಪದಗಳನ್ನು ಬಿಡಿಸಿದಾಗ ಭೀಮನ + ಅಂತೆ, ಶಾಲೆಯ + ತನಕ, ಆಕೆಗೆ + ಇಂತ ಎಂದಾಗುವುದು. ಹೀಗೆ....

**ನಾಮಪದಗಳ ಮುಂದೆ ಅಂತೆ, ವೊಲ್, ವೋಲು, ತನಕ, ವರೆಗೆ, ಇಂತ, ಆಗಿ, ಓಸುಗ ಮುಂತಾದ ಪ್ರತ್ಯಯಗಳು ಸೇರಿ ತದ್ಧಿತಾಂತಾವ್ಯಯಗಳಾಗುತ್ತವೆ. ಈ ಪ್ರತ್ಯಯಗಳು ಬಂದಾಗ ನಾಮಪದದಲ್ಲಿರುವ ವಿಭಕ್ತಿ ಪ್ರತ್ಯಯಗಳು ಲೋಪವಾಗುವುದಿಲ್ಲ.**

**ಉದಾ:**

**ಅಂತೆ** : ಚಂದ್ರನಂತೆ, ಅವನಂತೆ
**ವೊಲ್** : ಚಂದ್ರನವೊಲ್, ಅವನವೊಲ್
**ವೊಲು** : ನನ್ನವೊಲು, ಅವಳವೊಲು
**ವೋಲು** : ಮನೆಯವೋಲು, ಇದರವೋಲು
**ವೋಲ್** : ಕರಡಿಯವೋಲ್, ನದಿಯವೋಲ್
**ತನಕ** : ಮನೆಯತನಕ, ಹಿಮಾಲಯದತನಕ
**ವರೆಗೆ** : ಶಾಲೆಯವರೆಗೆ, ಪಟ್ಟಣದವರೆಗೆ
**ಮಟ್ಟಿಗೆ** : ಇವಳಮಟ್ಟಿಗೆ, ಸುಂದರನಮಟ್ಟಿಗೆ
**ಓಸ್ಕರ** : ನನಗೋಸ್ಕರ, ಬೆಕ್ಕಿಗೋಸ್ಕರ
**ಸಲುವಾಗಿ** : ಅರ್ಜುನನ ಸಲುವಾಗಿ, ಕಟ್ಟಡದ ಸಲುವಾಗಿ
**ಇಂತ** : ರಾಧೆಗಿಂತ, ಅದಕ್ಕಿಂತ
**ಆಗಿ** : ನಿನಗಾಗಿ, ಇದಕ್ಕಾಗಿ
**ಓಸುಗ** : ಮದುವೆಗೋಸುಗ, ಕಾಗೆಗೋಸುಗ

## ಅಭ್ಯಾಸ ಪ್ರಶ್ನೆಗಳು

೧. ತದ್ಧಿತಾಂತಗಳೆಂದರೇನು?

೨. ತದ್ಧಿತಾಂತ ಭಾವನಾಮಗಳೆಂದರೇನು? ಉದಾಹರಣೆ ಸಹಿತ ವಿವರಿಸಿ.

## ಪತ್ರಿಕಾವರದಿ

## "ಇಂದಿನ ಮಕ್ಕಳೇ ಮುಂದಿನ ಜನಾಂಗ"

ತುಮಕೂರು: ನ.೧೪:– "ಭಾರತದ ಪ್ರಧಾನಿ ಜವಾಹರಲಾಲರು ತನ್ನ ಹುಟ್ಟುಹಬ್ಬವನ್ನು ಮಕ್ಕಳ ದಿನವನ್ನಾಗಿ ಆಚರಿಸಲು ಕರೆಯಿತ್ತಿರುವುದು ಎಲ್ಲರಿಗೂ ತಿಳಿದ ವಿಷಯ ನೆಹರೂರವರ ಚಿಂತನೆಯಂತೆ ಇಂದಿನ ಮಕ್ಕಳೇ ಮುಂದಿನ ಜನಾಂಗ. ಅದಕ್ಕಾಗಿ ಮಕ್ಕಳ ಬಗ್ಗೆ ಹೆಚ್ಚು ಕಾಳಜಿ ವಹಿಸಬೇಕೆಂಬುದು ಅವರ ಆಶಯವಾಗಿತ್ತು. ಇಂದು ನಿಮ್ಮ ಶಾಲೆಯಲ್ಲಿ ಆಚರಿಸುತ್ತಿರುವ ಮಕ್ಕಳದಿನದ ಸಂಭ್ರಮದಿಂದಾಗಿ ನೆಹರೂರವರ ಆತ್ಮಕ್ಕೆ ಶಾಂತಿ ಲಭಿಸಿದಂತಾಯ್ತು" ಎಂದು ಸ್ಥಳೀಯ ಶಾಸಕರು ಹೇಳಿದರು.

ಇಲ್ಲಿನ ಜ್ಞಾನಭಾರತಿ ಪ್ರೌಢಶಾಲೆಯಲ್ಲಿ ಮಕ್ಕಳ ದಿನಾಚರಣೆ ನಡೆಯುತ್ತಿರುವ ಸಂದರ್ಭದಲ್ಲಿ ಸಮಾರಂಭದ ಅಧ್ಯಕ್ಷಸ್ಥಾನದಿಂದ ಅವರು ಮಾತನಾಡುತ್ತಿದ್ದರು.

ಶಾಲಾ ಮುಖ್ಯೋಪಾಧ್ಯಾಯರು ರಾಷ್ಟ್ರಧ್ವಜವನ್ನು ಅರಳಿಸಿದರು. ವಿವಿಧ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಶಾಸಕರು ಬಹುಮಾನ ವಿತರಿಸಿದರು. ಮಕ್ಕಳಿಂದ ವಿವಿಧ ವಿನೋದಾವಳಿ ನಡೆಯಿತು. ಸಹಶಿಕ್ಷಕ ರಾಮಯ್ಯನವರು ಸ್ವಾಗತಿಸಿ, ಸಹಶಿಕ್ಷಕಿ ಕುಮುದ ವಂದಿಸಿದರು. ಚಿತ್ರಕಲಾಶಿಕ್ಷಕ ರೋಬರ್ಟ್ ಕಾರ್ಯಕ್ರಮ ನಿರೂಪಿಸಿದರು. ರಾಷ್ಟ್ರಗೀತೆಯೊಂದಿಗೆ ಸಮಾರಂಭ ಸಂಪನ್ನಗೊಂಡಿತು.

.......................

(ವರದಿಗಾರರ ಸಹಿ)



## ಭಾಷಾ ಚಟುವಟಿಕೆ

೧. **ಕೊಟ್ಟಿರುವ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ.**

ಕಕ್ಕಾಬಿಕ್ಕಿ, ಆರಂಭಿಸು, ಪ್ರಯತ್ನಿಸು, ಘಾಸಿಗೊಳಿಸು

೨. **ಕೊಟ್ಟಿರುವ ಪದಗಳ ವಿರುದ್ಧಾರ್ಥಕ ಪದ ಬರೆಯಿರಿ.**

ಒಳಿತು, ಸಮಷ್ಟಿ, ಪುಣ್ಯ, ಬೆಳಕು, ಧರ್ಮ

## ಹೆಚ್ಚಿನ ಓದು

೧. ದೇವನೂರರ ಕತೆಗಳನ್ನು ಓದಿರಿ.

೨. ದೇವನೂರರ 'ಎದೆಗೆ ಬಿದ್ದ ಅಕ್ಷರ' ಮತ್ತು 'ಯಾರ ಜಪ್ತಿಗೂ ಸಿಗದ ನವಿಲುಗಳು' ಪುಸ್ತಕಗಳನ್ನು ಗಮನಿಸಿ.



# ಗದ್ಯಪಾಠ – ೦೭

# ವೃಕ್ಷಸಾಕ್ಷಿ

– ದುರ್ಗಸಿಂಹ

**ಮುನ್ನುಡಿ :** ಮೌಖಿಕ ಪರಂಪರೆಯಲ್ಲಿ ಸಾಗಿಬಂದು ಇಂದು ಗ್ರಂಥಸ್ಥರೂಪ ಪಡೆದಿರುವ ಕನ್ನಡ ಕಥಾಸಾಹಿತ್ಯ ಅತ್ಯಂತ ಜನಪ್ರಿಯ ಪ್ರಕಾರ. ಮನರಂಜನೆಯ ಜೊತೆಗೆ ಜೀವನ ಮೌಲ್ಯಗಳಾದ ಸತ್ಯ, ಪ್ರೇಮ, ಅಹಿಂಸೆ, ತ್ಯಾಗ, ನಿಸ್ವಾರ್ಥಸೇವೆ ಮುಂತಾದ ವಿಷಯಗಳನ್ನು ಪ್ರತಿಪಾದಿಸುತ್ತವೆ. ದೇವತೆಗಳು, ಮನುಷ್ಯರು, ಪ್ರಾಣಿಗಳು, ಪಕ್ಷಿಗಳು, ಯಕ್ಷ ಯಕ್ಷಿಣಿಯರು, ಅಸುರರು, ಮುಂತಾದ ಪಾತ್ರಗಳ ಮೂಲಕ ಕಥೆಗಳು ವಿಸ್ತಾರವನ್ನು ಪಡೆಯುತ್ತವೆ. ಕಥಾಸಾಹಿತ್ಯದಲ್ಲಿ ದುರ್ಗಸಿಂಹನ ಪಂಚತಂತ್ರದ ಕಥೆಗಳು ಅಬಾಲವೃದ್ಧರಿಗೂ ಪ್ರಿಯವಾಗುತ್ತವೆ.

ವಿಷ್ಣುಶರ್ಮನ ಸಂಸ್ಕೃತ ಪಂಚತಂತ್ರ ಕೃತಿಯನ್ನು ದುರ್ಗಸಿಂಹನು ಕನ್ನಡಕ್ಕೆ ಅಳವಡಿಸಿ ಚಂಪೂ ಶೈಲಿಯಲ್ಲಿ ರಚಿಸಿದ್ದಾನೆ. ಪಂಚತಂತ್ರ ಕಥಾಸಂಕಲನ ಕನ್ನಡ ಸಾಹಿತ್ಯ ಪರಂಪರೆಯನ್ನು ಶ್ರೀಮಂತಗೊಳಿಸಿದ ಕೃತಿಗಳಲ್ಲಿ ಮಹತ್ವದ್ದು.



### ಅರ್ಥೈಸಿ ಓದಿ

**ವಣಿಕ್ಪುತ್ರರ್, ಪರದುವೋಗಿ, ಬೀಯಕ್ಕೆ, ಕುಟಿ, ಧರ್ಮಾಧಿಕರಣರ್, ಅಶ್ರುತಪೂರ್ವಂ, ಕಟ್ಟೇಕಾಂತ, ಪಟುವಗೆ, ನೀರದಾಗಮ, ಶಿತಿಕಂಠ, ಅಬ್ಜೋದರ, ಬೇಹಾರಿ, ಕಂಠಗತಪ್ರಾಣ**

ಮಧುರಾ ನಗರದೊಳಗೆ ಧರ್ಮಬುದ್ಧಿಯುಂ ದುಷ್ಟಬುದ್ಧಿಯುಮೆಂಬರಿರ್ವರ್ ವಣಿಕ್ಪುತ್ರರ್ ಪುದುವಿನೊಳ್ ಪರದುವೋಗಿ ಪಿರಿದಪ್ಪ ಪೊನ್ನ ಪಡೆದು ಮಗುಟ್ದು ಬಂದು ನಿಜಜನ್ಮಭೂಮಿಯಪ್ಪ ಮಧುರಾಪುರದ ಬಹಿರುದ್ಯಾನವನದೊಳಗೆ ಬೀಡಂ ಬಿಟ್ಟರ್ಧರಾತ್ರಿಯೊಳ್ ಧರ್ಮಬುದ್ಧಿ ದುರ್ಬುದ್ಧಿಯಪ್ಪ ದುಷ್ಟಬುದ್ಧಿಯಂ ಕರೆದು ಪೊನ್ನಂ ಪಚ್ಚುಕೊಳ್ವಮೆನೆ ದುಷ್ಟಬುದ್ಧಿ ಪಾಪಬುದ್ಧಿಯಾಗಲ್ಬಗೆದಿಂತೆಂದಂ : ನಾವೀ ಪೊನ್ನಂ ಪಚ್ಚುಕೊಂಡು ಮನೆಯೊಳ್ ಸ್ವೇಚ್ಛೆಯಿಂದಿರ್ಪವರಲ್ಲಂ ಮತ್ತಂ ಪರದುವೋಗಲ್ವೇಟ್ಕುಮದುಕಾರಣದಿಂ ನಿನಗಮೆನಗಂ ಬೀಯಕ್ಕೆ ತಕ್ಕನಿತು ಪೊನ್ನಂ ಕೊಂಡು ಮಿಕ್ಕ ಪೊನ್ನನೆಲ್ಲಮನಿಲ್ಲಿಯೆ ಮಡಂಗುವಮೆನೆ, ಧರ್ಮಬುದ್ಧಿಯಾ ಪಾಪಕರ್ಮನಂ ತನ್ನ ಮನದನ್ನನೆಂದೆ ಬಗೆದುಮದರ್ಕೊಡಂಬಟ್ಟೊಂದು ಮಹಾವಟವಿಟಪಿಯ ಕೆಲದೊಳ್ ಪೊನ್ನಂ ಪೂಟ್ದು ಮಱುದಿವಸಮಿರ್ವರುಂ ಪೊಟಲಂ ಪೊಕ್ಕು ಇಷ್ಟವಿಷಯ ಸುಖಂಗಳನನುಭವಿಸುತಿರ್ದು ದುಷ್ಟಬುದ್ಧಿ ಧರ್ಮಬುದ್ಧಿಯಂ ವಂಚಿಸಿ ಪೋಗಿ ಪೊನ್ನನೆಲ್ಲಮಂ ಕೊಂಡು ಕುಟಿಯಂ ಮುನ್ನಿನಂತೆ ಪೂಟ್ದು ಕೆಲವಾನುಂ ದಿವಸಕ್ಕೆ ತಾನೆ ಧರ್ಮಬುದ್ಧಿಯಲ್ಲಿಗೆ ವಂದು ಬೀಯಕ್ಕೆ ಪೊನ್ನಿಲ್ಲವಿನ್ನುಂ ಕಿಱಿದು ಪೊನ್ನಂ ತೆಗೆದುಕೊಳ್ವಂ ಬನ್ನಿಮೆಂದೊಡಂಗೊಂಡು ಪೋಗಿ ಪೂಟ್ದೆಡೆಯೊಳ್ ಪೊನ್ನಂ ಕಾಣದೆ ಇನ್ನುಸಿರದಿರ್ದೊಡೆ ಅನೃತಂ ತನ್ನ ಮೇಲೆ ವರ್ಪುದೆಂದು ಪೊನ್ನನೆಲ್ಲಮಂ ನೀನೆ ಕೊಂಡೆಯೆಂಬುದುಂ

ತಮ್ಮನಾದ ಲಕ್ಷ್ಮಣನನ್ನು ಕರೆದು ತುಂಬುಗರ್ಭಿಣಿಯಾದ ಸೀತೆಯನ್ನು ಕಾಡಿನಲ್ಲಿ ಬಿಟ್ಟು ಬರುವಂತೆ ಆಜ್ಞಾಪಿಸುತ್ತಾನೆ. ಪ್ರಜೆಗಳ ಅಭಿಪ್ರಾಯವೇ ಸರ್ವಸ್ವವೆಂದು ತಿಳಿದ ರಾಮನ ಈ ಆಜ್ಞೆಯಂತೆ ಲಕ್ಷ್ಮಣ ವಾಲ್ಮೀಕಿ ಆಶ್ರಮಕ್ಕೆ ಹೋಗುವ ನೆಪದೊಂದಿಗೆ ಸೀತೆಯನ್ನು ಕಾಡಿಗೆ ಕೊಂಡೊಯ್ಯುತ್ತಾನೆ.

ಕಾಡಿನಲ್ಲಿ ಏಕಾಂಗಿಯಾಗಿದ್ದ ಸೀತೆ ದುಃಖಿಸುತ್ತಿರುವ ಸಂದರ್ಭದಲ್ಲಿ ಆ ಪ್ರದೇಶಕ್ಕೆ ಬಂದ ವಾಲ್ಮೀಕಿ ಮಹರ್ಷಿಗಳು ಸೀತೆಯನ್ನು ತಮ್ಮಾಶ್ರಮಕ್ಕೆ ಕರೆದೊಯ್ಯುತ್ತಾರೆ. ಆಶ್ರಮದಲ್ಲಿ ಕೆಲವೇ ದಿನಕ್ಕೆ ಸೀತೆ ಅವಳಿ ಮಕ್ಕಳನ್ನು ಹಡೆಯುತ್ತಾಳೆ. ವಾಲ್ಮೀಕಿ ಮಹರ್ಷಿಗಳು ಈ ಮಕ್ಕಳಿಗೆ ಕುಶ, ಲವರೆಂದು ನಾಮಕರಣ ಮಾಡಿ ಸಕಲ ವಿದ್ಯಾಪಾರಂಗತರನ್ನಾಗಿ ಮಾಡುತ್ತಾರೆ.

ಇತ್ತ ಸೀತೆಯ ಅಗಲುವಿಕೆಯಿಂದ ರಾಮ ಮಾನಸಿಕವಾಗಿ ದುಃಖಕ್ಕೀಡಾಗುತ್ತಾನೆ. ರಾವಣನ ವಧೆಯಿಂದ ಬ್ರಹ್ಮಹತ್ಯಾದೋಷ ಬಂದಿರುವುದನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಮಹರ್ಷಿಗಳ ಆದೇಶದಂತೆ ರಾಮ ಅಶ್ವಮೇಧವನ್ನು ಕೈಗೊಂಡು ಸಂಚಾರಕ್ಕೆ ತೆರಳಿದ ಕುದುರೆಯ ಬೆಂಗಾವಲಿಗೆ ಶತ್ರುಘ್ನನನ್ನು ಕಳುಹಿಸುತ್ತಾನೆ. ದೇಶದೇಶಗಳನ್ನು ಸುತ್ತಾಡಿದ ಅಶ್ವಮೇಧದ ಕುದುರೆ ಒಂದು ದಿನ ವಾಲ್ಮೀಕಿ ಆಶ್ರಮಕ್ಕೆ ಬರುತ್ತದೆ. ಶ್ರೀರಾಮನೇ ತನ್ನ ತಂದೆ ಎಂದು ತಿಳಿಯದ ಲವ ಕುದುರೆಯನ್ನು ಕಟ್ಟುವ ಸನ್ನಿವೇಶವೇ ಈ ಪಾಠ ಭಾಗ.

## ಪದ ವಿಂಗಡಿಸಿ ಓದಿ

೧. ಬಲ್ಗಯ್ಯ ನೃಪರ್+ಅಂಜಿ ತಡೆಯದೆ ರಘು+ಉದ್ವಹನ ಸೊಲ್+ಕೇಳಿ ನಮಿಸಲ್+ಇಳೆಯೊಳ್ ಚರಿಸುತ+ಅಧ್ವರದ ನಲ್+ಕುದುರೆ ಬಂದು ವಾಲ್ಮೀಕಿಯ ನಿಜ+ಆಶ್ರಮದ ವಿನಿಯೋಗದ+ ಉಪವನದೊಳು ಪುಲ್ಗಳ ಪಸುರ್ಗೆ+ಎಳಸಿ ಪೊಕ್ಕೊಡೆ+ಆ ತೋಟ+ಕಾವಲ್ಗೆ ತನ್ನ+ಒಡನಾಡಿಗಳ ಕೂಡಿ ಲೀಲೆಮಿಗೆ ಬಿಲ್+ಕೊಂಡು ನಡೆತಂದ+ಅವಂ ಕಂಡನು+ಅರ್ಚಿತ ಸುವಾಜಿಯಂ ವೀರಲವನು.

೨. ಎತ್ತಣ ತುರಂಗವಹ್+ಇದು ಪೊಕ್ಕು ಪೂದೋಟಮಂ ತೊತ್ತಳ+ತುಳಿದುದು ವಾಲ್ಮೀಕಿಮುನಿನಾಥನ್+ಏಪೊತ್ತುಮ್+ಆರೈವುದು+ಎಂದು+ಎನಗೆ ನೇಮಿಸಿ ಪೋದನ್+ಅಬ್ಧಿಪಂ ಕರೆಸಲಾಗಿ, ಮತ್ತೆ ವರುಣನ ಲೋಕದಿಂ ಬಂದು ಮುಳಿದಪನ್+ಎನುತ್ತ ಹಯದ+ಎಡೆಗೆ ನಡೆತಂದು ನೋಡಲ್ಕೆ+ಅದರ ನೆತ್ತಿಯೊಳ್ ಮೆರೆವ ಪಟ್ಟದ ಲಿಖಿತಮಂ ಕಂಡು ಲವನ್+ ಓದಿಕೊಳುತ+ಇರ್ದನು.

೩. ಉರ್ವಿಯೊಳ್ ಕೌಸಲ್ಯೆ ಪಡೆದ ಕುವರಂ ರಾಮನ್+ಒರ್ವನೇ ವೀರನ್+ಆತನ ಯಜ್ಞತುರಗಮ್+ಇದ ನಿರ್ವಹಿಸಲ್+ಆರ್ಪರ್+ಆರ್+ಆದೊಡಂ ತಡೆಯಲಿ+ಎಂದು+ಇರ್ದ ಲೇಖನವನ್+ಓದಿ ಗರ್ವಮಂ ಬಿಡಿಸದೆ+ಇರ್ದೊಡೆ ತನ್ನ ಮಾತೆಯಂ ಸರ್ವ ಜನಮುಂ ಬಂಜೆ+ಎನ್ನದೆ+ಇರ್ದಪುದೆ ತನಗೆ+ಉರ್ವ+ತೋಳ್ಗಳ್+ಇವು+ಏತಕೆ+ಎಂದು ಸಲೆ ವಾಸಿಯಂ ತೊಟ್ಟು ಲವನ್+ಉರಿದು+ಎದ್ದನು.

೪. ತೆಗೆದು+ಉತ್ತರೀಯಮಂ ಮುರಿದು ಕುದುರೆಯ ಗಳಕೆ ಬಿಗಿದು ಕದಳೀದ್ರುಮಕೆ ಕಟ್ಟಲ್ಕೆ ಮುನಿಸುತರ್ ಮಿಗೆ ನಡುಗಿ ಬೇಡ ಬೇಡ ಅರಸುಗಳ ವಾಜಿಯಂ ಬಿಡು ಬಡಿವರ್+ಎಮ್ಮನ್+ಎನಲು ನಗುತೆ

ಪಾರ್ವರ ಮಕ್ಕಳ್+ಅಂಜಿದೊಡೆ ಜಾನಕಿಯ ಮಗನ್+ಇದಕೆ ಬೆದರುವನೆ ಪೋಗಿ ನೀವ್+ಎಂದು ಲವನ್+ಅಗಡುತನದಿಂದೆ ಬಿಲ್+ತಿರುವನ್+ಏರಿಸಿ ತೀಡಿ ಜೇಗೈದು ನಿಂತು+ಇರ್ದನು.

## ಪದ–ಅರ್ಥ

೧. ನೃಪ–ದೊರೆ, ಅಂಜಿ–ಹೆದರಿ, ಚರಿಸು–ಸಂಚರಿಸು, ಉಪವನ–ಉದ್ಯಾನವನ, ಪಸುರು–ಹಸುರು.

೨. ತುರಂಗ–ಕುದುರೆ, ಅಬ್ಧಿಪ–ವರುಣ, ಮುಳಿ–ಕೋಪ, ಹಯ–ಕುದುರೆ, ನೆತ್ತಿ–ಹಣೆ, ಲಿಖಿತ–ಬರಹ.

೩. ಉರ್ವಿ–ಭೂಮಿ, ಆರ್ಪರ್–ಸಮರ್ಥರು, ಬಂಜೆ(ದ್ಭ)–ವಂಧ್ಯಾ (ತ್ಸ) – ಸಂತಾನವಿಲ್ಲದವಳು; ವಾಸಿ–ಪ್ರತಿಜ್ಞೆ

೪. ವಾಜಿ–ಕುದುರೆ, ಗಳ–ಕೊರಳು, ಕದಳಿ–ಬಾಳೆ, ಬಡಿ–ಹೊಡೆ, ಚಚ್ಚು, ಅಗಡು–ಶೌರ್ಯ.

## ಪಠ್ಯಾಧಾರ ಟಿಪ್ಪಣಿ

**ರಘು** : ಸೂರ್ಯ ವಂಶದ ಅರಸ. ತನ್ನ ಪರಾಕ್ರಮದಿಂದ ಭೂಮಂಡಳವನ್ನು ಗೆದ್ದು **'ವಿಶ್ವಜಿತ್'** ಎಂಬ ಯಾಗ ಮಾಡಿ ಸರ್ವಸ್ವವನ್ನು ದಾನಮಾಡಿ ಪ್ರಸಿದ್ಧನಾದ. ಸೂರ್ಯವಂಶದ ಶ್ರೇಷ್ಠ ಅರಸನಾದ ಕಾರಣ ಈತನ ಕಾಲಾನಂತರ ಸೂರ್ಯವಂಶಕ್ಕೆ **ರಘುವಂಶ** ಎಂಬ ಹೆಸರು ಬಂತು.

**ವಾಲ್ಮೀಕಿ** : ಒಬ್ಬ ಬ್ರಹ್ಮರ್ಷಿ. ಪ್ರಚೇತಸನ ಮಗನಾದುದರಿಂದ ಪ್ರಾಚೇತಸ ಎಂಬ ಹೆಸರೂ ಇದೆ. ಯೌವನಾವಸ್ಥೆಯಲ್ಲಿ ಬೇಡರ ಸಂಗಡ ಸೇರಿ ದಾರಿಗಳ್ಳನಾಗಿದ್ದ. ನಾರದ ಮಹರ್ಷಿಗಳ ಬೋಧನೆಯಿಂದ ರಾಮನಾಮ ಜಪಿಸುತ್ತಿದ್ದಾಗ ಈತನ ಮೈಮೇಲೆ ಹುತ್ತ (ವಲ್ಮೀಕ) ಬೆಳೆಯಿತು. ನಾರದ ಮಹರ್ಷಿಗಳಿಂದಾಗಿ ವಲ್ಮೀಕದಿಂದ ಹೊರಗೆ ಬಂದ ಈತನು **ವಾಲ್ಮೀಕಿ** ಎಂದು ಪ್ರಸಿದ್ಧನಾದನು. ಆದಿಕಾವ್ಯ **ರಾಮಾಯಣ**ವನ್ನು ರಚಿಸಿ ಕೀರ್ತಿವಂತನಾದ.

**ವರುಣ** : ಅಷ್ಟದಿಕ್ಪಾಲಕರಲ್ಲಿ ಒಬ್ಬನಾದ ಈತ ಪಶ್ಚಿಮದಿಕ್ಕಿಗೆ ಒಡೆಯ. ಜಲಾಧಿಪತಿ ಎಂದು ಪ್ರಸಿದ್ಧನಾದವ.

**ಲವ** : ಶ್ರೀರಾಮನಿಂದ ಸೀತೆಯಲ್ಲಿ ಜನಿಸಿದ ಅವಳಿ ಮಕ್ಕಳಲ್ಲಿ ಚಿಕ್ಕವ. ಶ್ರೀರಾಮನಿಂದ ಪರಿತ್ಯಕ್ತಳಾದ ತುಂಬುಗರ್ಭಿಣಿ ಸೀತೆ ವಾಲ್ಮೀಕಿ ಆಶ್ರಮದಲ್ಲಿ ಆಶ್ರಯ ಪಡೆದ ಸಂದರ್ಭದಲ್ಲಿ ಜನಿಸಿದವ. ವಾಲ್ಮೀಕಿಯಿಂದ ರಚಿತವಾದ ರಾಮಾಯಣವನ್ನು ಅಣ್ಣ ಕುಶನ ಜೊತೆ ಸೇರಿ ಹಾಡುತ್ತಿದ್ದ.

**ಅಬ್ಧಿಪ** : ಅಬ್ಧಿ – ಸಮುದ್ರ, ಪ – ಒಡೆಯ, ಅಬ್ಧಿಪ – ಸಮುದ್ರದ ಒಡೆಯ – ವರುಣ

**ಜೇಗೆಯ್** : ಬಿಲ್ಲಿಗೆ ಕಟ್ಟುವ ಹಗ್ಗವನ್ನು **ಹೆದೆ** ಎಂದು ಕರೆಯುತ್ತಾರೆ. ಈ ಹೆದೆಯನ್ನು ಬೇಕಾದಾಗ ಮಾತ್ರ ಬಿಗಿಯಲಾಗುತ್ತದೆ. ಉಳಿದ ಸಂದರ್ಭದಲ್ಲಿ ಬಿಲ್ಲಿನ ಒಂದು ತುದಿಯಲ್ಲಿ ಮಾತ್ರ ಕಟ್ಟಿರುತ್ತಾರೆ. ಯುದ್ಧಕ್ಕೆ ಸನ್ನದ್ಧನಾದಾಗ ಬಿಲ್ಲುಗಾರ ತನ್ನ ಬಿಲ್ಲಿನ ಹೆದೆಯನ್ನು ಅದರ ಇನ್ನೊಂದು ತುದಿಗೆ ಬಿಗಿಯಾಗಿ ಕಟ್ಟುತ್ತಾನೆ. ಈ ಹೆದೆಯ ಬಿಗಿತ ಸರಿಯಾಗಿದ್ದರೆ ಮಾತ್ರ ಬಾಣ ಗುರಿ ಮುಟ್ಟುತ್ತದೆ. ಅದಕ್ಕಾಗಿ ಬಿಲ್ಲುಗಾರ ಬಿಲ್ಲಿನ ಹೆದೆಯನ್ನು ಆಕರ್ಣಾಂತ (ಕಿವಿಯವರೆಗೆ) ಎಳೆದು ಬಿಡುತ್ತಾನೆ. ಆಗ ಆ ಹೆದೆ ಮೊದಲಿದ್ದ ಸ್ಥಳಕ್ಕೆ ಹೋಗುವಾಗ **'ಝೇಂ'** ಎಂಬ ಧ್ವನಿ ಮಾಡುತ್ತದೆ. ಈ ಧ್ವನಿಯ ಸಹಾಯದಿಂದ ಬಿಲ್ಲುಗಾರ ಹೆದೆಯ ಬಿಗಿತ ಸರಿಯಾಗಿದೆಯೇ ಎಂದು ಪರೀಕ್ಷಿಸುತ್ತಾನೆ. ಈ ಕ್ರಿಯೆಗೆ **'ಜೇಗೆಯ್ಯು'**ವುದು ಎಂದು ಹೇಳಲಾಗುತ್ತದೆ.

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧. 'ಜೈಮಿನಿ ಭಾರತ' ಕಾವ್ಯವನ್ನು ಬರೆದ ಕವಿ ಯಾರು?

೨. ಯಜ್ಞಾಶ್ವವನ್ನು ಕಟ್ಟಿದವರು ಯಾರು?

೩. ಕುದುರೆಯನ್ನು ಲವನು ಯಾವುದರಿಂದ ಕಟ್ಟಿದನು?

೪. ಮುನಿಸುತರು ಹೆದರಲು ಕಾರಣವೇನು?

**ಆ. ಮೂರುನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ವಾಲ್ಮೀಕಿ ಆಶ್ರಮಕ್ಕೆ ಯಜ್ಞಾಶ್ವವು ಬಂದ ಬಗೆಯನ್ನು ವಿವರಿಸಿ.

೨. ಯಜ್ಞಾಶ್ವದ ಹಣೆಯಲ್ಲಿದ್ದ ಪಟ್ಟಿಯಲ್ಲಿ ಏನೆಂದು ಬರೆಯಲಾಗಿತ್ತು?

೩. ಕುದುರೆಯನ್ನು ಕಟ್ಟುವ ವಿಚಾರದಲ್ಲಿ ಮುನಿಸುತರಿಗೂ ಲವನಿಗೂ ನಡೆದ ಸಂವಾದವನ್ನು ಬರೆಯಿರಿ.

**ಇ. ಎಂಟುಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಲವನು ಯಜ್ಞಾಶ್ವವನ್ನು ಕಟ್ಟಲು ಕಾರಣವೇನು?

೨. ಲವನ ನಡೆವಳಿಕೆ ಮೆಚ್ಚುಗೆಯಾಯಿತೇ? ಏಕೆ?

**ಈ. ಸಂದರ್ಭಾನುಸಾರ ಸ್ವಾರಸ್ಯವನ್ನು ಬರೆಯಿರಿ.**

೧. "ರಘೂದ್ವಹನ ಸೊಲ್ಗೇಳಿ ನಮಿಸಲ್"

೨. "ತನ್ನ ಮಾತೆಯಂ ಸರ್ವಜನಮುಂ ಬಂಜೆಯೆನ್ನದಿರ್ದಪುದೆ"

೩. "ಅರಸುಗಳ ವಾಜಿಯಂ ಬಿಡು"

೪. "ಜಾನಕಿಯ ಮಗನಿದಕೆ ಬೆದರುವನೆ"



**ಉ. ಹೊಂದಿಸಿ ಬರೆಯಿರಿ.**

| | ಅ | | ಬ |
|---|---|---|---|
| ೧. | ದೇವನೂರು | – | ರಾಮ |
| ೨. | ಕೌಸಲ್ಯೆ | – | ಲಕ್ಷ್ಮೀಶ |
| ೩. | ವರುಣ | – | ಅಶ್ವ |
| ೪. | ವಾಲ್ಮೀಕಿ | – | ಅಬ್ಧಿಪ |
| ೫. | ತುರಂಗ | – | ಮುನಿ |
| | | – | ಮಳೆ |
| | | – | ಶತ್ರುಘ್ನ |

## ಸೈದ್ಧಾಂತಿಕ ಭಾಷಾಭ್ಯಾಸ

## ವಾರ್ಧಕ ಷಟ್ಪದಿ

**ಲಕ್ಷಣ :** ಒಂದು, ಎರಡು, ನಾಲ್ಕು ಮತ್ತು ಐದನೆಯ ಪಾದಗಳು ಮಾತ್ರಾಸಂಖ್ಯೆಯಲ್ಲಿ ಸಮಾನವಾಗಿದ್ದು ಐದು ಮಾತ್ರೆಗಳ ನಾಲ್ಕು ಗಣಗಳು ಪ್ರತಿಪಾದದಲ್ಲೂ ಇರುತ್ತವೆ. ಮೂರು ಮತ್ತು ಆರನೆಯ ಪಾದಗಳು ಸಮಾನವಾಗಿದ್ದು ಐದು ಮಾತ್ರೆಗಳ ಆರಾರು ಗಣಗಳು ಪ್ರತಿಪಾದದಲ್ಲೂ ಇದ್ದು ಕೊನೆಯಲ್ಲಿ ಒಂದೊಂದು ಗುರು ಇರುತ್ತದೆ. ಆದಿ ಪ್ರಾಸವಿರುತ್ತದೆ.

**ಉದಾ :**

| | | | |
|---|---|---|---|
| UUUUU | – U U U | UUU– | U U U U U |
| ಸತಿಮಡಿಸಿ | ನೀಡುವೆಲೆ | ವಿಡಿದಕೈ | ಬಸವಳಿದು |

| | | | |
|---|---|---|---|
| UU– U | U U U U U | UU – U | UUU– |
| ದತಿಚಿಂತೆ | ಯೊಳುಮಱೆದ | ತನುಜೊಮ್ಮು | ವಿಡಿದಪು |

| | | | | | | |
|---|---|---|---|---|---|---|
| U U – U | – U – | – U – | U UU UU | – – U | –U U U | – |
| ರ್ಬತಿಭಾರ | ವಾಗಿಕ | ಣ್ಮುಚ್ಚಿತೋಳ್ | ತೊಡೆಮಿಡುಕೆ | ಸುಯ್ಸೂಸೆ | ನಿದ್ರೆ ಕವಿ | ದು |

| | | | |
|---|---|---|---|
| UUU UU | – U U U | –U – | – – U |
| ವಿತತಸುಖ | ದಿಂದಿರುತಿ | ರಲ್ಕೆನಾ | ನಾದುಃಖ |

| | | | |
|---|---|---|---|
| U U–U | – UUU | – –U | – U – |
| ಯುತವಪ್ಪು | ದೊಂದುಕನ | ಸಂಕಂಡು | ನೊಂದುಭೂ |

| | | | | | | |
|---|---|---|---|---|---|---|
| UUUUU | – U – | UU–U | –UUU | – U U U | – – U | – |
| ಪತಿಬೆದಱೆ | ದಂತೆಭೋಂ | ಕೆನಲೆದ್ದು | ಬೆಬ್ಬಳಿಸಿ | ನಾಲ್ದೆಸೆಯ | ನಾರಯ್ದು | ನು |



## ರಗಳೆ

**ಲಕ್ಷಣ :** ಇದು ಬಹುಪಾದಗಳುಳ್ಳ ಪದ್ಯವಾಗಿದೆ. ಇದರ ಎಲ್ಲಾ ಪಾದಗಳು ಮಾತ್ರಾ ಸಂಖ್ಯೆಯಲ್ಲಿ ಸಮಾನವಾಗಿರುತ್ತವೆ. ಎರಡೆರಡು ಪಾದಗಳಿಗೆ ಪ್ರಾಸಾಕ್ಷರವಿರುತ್ತದೆ. ಆದಿಪ್ರಾಸ ಸಾಮಾನ್ಯವಾಗಿದ್ದು ಅಂತ್ಯಪಾಸವೂ ಕೆಲವು ಕಡೆ ಇರುತ್ತದೆ. ಕನ್ನಡದಲ್ಲಿ **ಉತ್ಸಾಹ, ಮಂದಾನಿಲ** ಮತ್ತು **ಲಲಿತ** ಎಂಬ ಮೂರು ವಿಧದ ರಗಳೆಗಳು ಪ್ರಚಲಿತವಾಗಿವೆ.

**ಉತ್ಸಾಹರಗಳೆ :** ಇದರಲ್ಲಿ ಎರಡು ವಿಧಗಳಿವೆ. ಒಂದನೆಯ ವಿಧದಲ್ಲಿ ಮೂರು ಮಾತ್ರೆಗಳ ನಾಲ್ಕು ಗಣಗಳು ಇದ್ದರೆ ಎರಡನೆಯ ವಿಧದಲ್ಲಿ ಮೂರು ಮಾತ್ರೆಯ ಮೂರು ಗಣಗಳು ಮತ್ತು ಒಂದು ಗುರುವು ಪ್ರತಿ ಪಾದದಲ್ಲೂ ಇರುತ್ತವೆ.

ಉದಾ ೧ :

UU U | – U | – U | – U
ಕುಳಿರ್ವ | ಪೂಗೊ | ಳಂಗ | ಳಲ್ಲಿ

UUU | – U | – U | – U
ತಳಿರ | ಕಾವ | ಣಂಗ | ಳಲ್ಲಿ

ಇಲ್ಲಿರುವ ಮೊದಲ ಪಾದದ ಮೂರನೆಯ ಅಕ್ಷರ **'ರ್ವ'** ಎಂಬುದು ದ್ವಿತ್ವಾಕ್ಷರ (ಸಂಯುಕ್ತಾಕ್ಷರ)ವಾಗಿದ್ದರೂ ಇಲ್ಲಿನ ದ್ವಿತ್ವವು ಶಿಥಿಲವಾಗಿರುವ ಕಾರಣ ಇದರ ಹಿಂದಿನ ಅಕ್ಷರವಾದ **'ಳಿ'** ಎಂಬುದು ಗುರುವೆನಿಸದೆ ಲಘುವಾಗಿರುತ್ತದೆ ಎಂಬುದನ್ನು ಗಮನಿಸಬೇಕು. ಇದನ್ನೇ **'ಶಿಥಿಲದ್ವಿತ್ವ'** ಎಂದು ಕರೆಯುವುದು.

ಉದಾ ೨ :

– U | U U U | – U | –
ಮಾವಿ | ನೆಡೆಯೊ | ಳಾಡು | ತುಂ

– U | – U | – U | –
ಪಾಡ | ನೆಯ್ದೆ | ಕೇಳು | ತಂ

**ಮಂದಾನಿಲರಗಳೆ :** ಇದರಲ್ಲಿಯೂ ಎರಡು ಬಗೆಗಳಿವೆ. ಮೊದಲನೆಯದರಲ್ಲಿ ಪ್ರತಿಪಾದದಲ್ಲೂ ನಾಲ್ಕು ಮಾತ್ರೆಗಳ ನಾಲ್ಕು ಗಣಗಳಿರುತ್ತವೆ. ಎರಡನೆಯದರಲ್ಲಿ ಮೂರು ಮಾತ್ರೆಗಳ ಅನಂತರ ಐದು ಮಾತ್ರೆಗಳ ಎರಡೆರಡು ಗಣಗಳಿರುತ್ತವೆ.

ಉದಾ – ೧ :

– UU | – UU | – U U | U U – |
ಪಂಕಜ | ದಂತಿರೆ | ಪುಟ್ಟಿದ | ಳೊಲವಿಂ |

– U U | – – | – U U | U U – |
ಪಂಕವ | ನೆಂದುಂ | ಪೊರ್ದದೆ | ನಲವಿಂ |

ಉದಾ – ೨ :

– U | – UUU | UUU | – U – |
ಸುತ್ತ | ಲುಂ ಪರಿವ | ಜರಿವೊ | ನಲ್ಗಳಿಂ |

– U | – UUU | U U U | – U – |
ಎತ್ತ | ಲುಂನಲಿವ | ಪೊಸನ | ವಿಲ್ಗಳಿಂ |

**ಲಲಿತರಗಳೆ :** ಪ್ರತಿಪಾದದಲ್ಲಯೂ ಐದು ಮಾತ್ರೆಗಳ ನಾಲ್ಕು ಗಣಗಳು ಇರುತ್ತವೆ.

ಉದಾ :

– U – | – U U U | – UUU | – – U |
ಸೊಂಪಿನಿಂ | ಕಂಪಿಡುವ | ಸಂಪಗೆಗ | ಳಂಕೊಂಡು |

– U UU | – – U | UU – U | – – U |
ಹೊಂಪೆಸೆವ | ಹೊಂಗೇದ | ಗೆಯಹೂಗ | ಳಂಕೊಂಡು |

## ಶ್ಲೇಷಾಲಂಕಾರ

**ಲಕ್ಷಣ :** ಒಂದು ಪದವು ಒಂದಕ್ಕಿಂತ ಹೆಚ್ಚು ಅರ್ಥಕೊಡುವಂತಿದ್ದರೆ ಅಂತಹ ಪದಕ್ಕೆ **'ಶ್ಲೇಷಪದ'** ಎಂದು ಹೆಸರು, ಇಂತಹ ಶ್ಲೇಷಾರ್ಥಗಳನ್ನು ನೀಡಬಲ್ಲ ಪದಗಳಿರುವ ಅಲಂಕಾರವನ್ನು **ಶ್ಲೇಷಾಲಂಕಾರ** ಎಂದು ಕರೆಯುತ್ತಾರೆ.

**ಉದಾ :** ಅತಿಶಯ ಪದಾರ್ಥ ನಿಕರ ।
ಪ್ರತೀತಿಯಂ ಪಡೆವ ಪಾದವಿನ್ಯಾಸಂ ಭೂ ॥
ನುತಮಾಗದಲ್ತೆನಿರ್ದೋ ।
ಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ ॥

ಇಲ್ಲಿ **ಕವಿ** ಮತ್ತು **ರವಿ** ಒಂದೇ ಬಗೆಯ ಪದಗಳಿಂದ ವರ್ಣಿತರಾಗಿದ್ದಾರೆ. ಈ ವರ್ಣನೆಯಲ್ಲಿ **ಪದಾರ್ಥ, ಪಾದ, ನಿರ್ದೋಷತೆ** ಎಂಬ ಪದಗಳು **ಶ್ಲೇಷಾರ್ಥ**ದಿಂದ ಕೂಡಿವೆ. ಅವನ್ನು ಪರಿಶೀಲಿಸೋಣ.

| | ಪದ | | ಕವಿಯ ಪರವಾಗಿ | | ರವಿಯ ಪರವಾಗಿ |
|---|---|---|---|---|---|
| ೧. | ಪದಾರ್ಥ | – | ಪದದ ಅರ್ಥ (ಶಬ್ದಾರ್ಥ) | – | ವಸ್ತು |
| ೨. | ಪಾದ | – | ಪದ್ಯದ ಸಾಲು | – | ಕಿರಣ |
| ೩. | ನಿರ್ದೋಷತೆ | – | ದೋಷವಿಲ್ಲದಿರುವಿಕೆ | – | ಕತ್ತಲಿಲ್ಲದಿರುವಿಕೆ (ಹಗಲು) |

### ಭಾಷಾಚಟುವಟಿಕೆ

೧. **ವಿಗ್ರಹಿಸಿ ಸಮಾಸವನ್ನು ಹೆಸರಿಸಿ.**
ಸೊಲ್ಗೇಳಿ, ನಲ್ಗುದುರೆ, ಬಿಲ್ಗೊಂಡು, ಬಿಲ್ದಿರುವನೇರಿಸಿ, ಪೂದೋಟ

೨. **ತತ್ಸಮ–ತದ್ಭವ ಬರೆಯಿರಿ.**
ವೀರ, ಯಜ್ಞ, ಬಂಜೆ

೩. **ಬಿಂಗಡಿಸಿ ಸಂಧಿಯ ಹೆಸರು ಬರೆಯಿರಿ.**
ಚರಿಸುತದ್ವರದ, ನಿಜಾಶ್ರಮ, ಲೇಖನವನೋದಿ, ತೆಗೆದುತ್ತರೀಯಮಂ, ಬೇಡಬೇಡರಸುಗಳ, ನಿಂತಿರ್ದನು.

೪. **ಪ್ರಸ್ತಾರಹಾಕಿ ಗಣ ವಿಭಾಗ ಮಾಡಿ ಛಂದಸ್ಸನ್ನು ಹೆಸರಿಸಿ ಲಕ್ಷಣ ಬರೆಯಿರಿ.**
ಉರ್ವಿಯೊಳ್ ಕೌಸಲ್ಯೆ ಪಡೆದ ಕುವರಂ ರಾಮ ।
ನೊರ್ವನೇ ವೀರನಾತನ ಯಜ್ಞ ತುರಗಮಿದು ।
ನಿರ್ವಹಿಸಲಾರ್ಪರಾರಾದೊಡಂ ತಡೆಯಲೆಂದಿರ್ದ ಲೇಖನವನೋದಿ ॥

### ಚಟುವಟಿಕೆ

**ಈ ಪದ್ಯಭಾಗವನ್ನು ಕಂಠಪಾಠ ಮಾಡಿ.**

ತೆಗೆದು ......................... ನಿಂತಿರ್ದನು ॥



# ಸಾರ್ಥಕತೆ

**ಮುನ್ನುಡಿ:** 'ಕೈಕೆಸರಾದರೆ ಬಾಯಿ ಮೊಸರು' ಎಂಬುದೊಂದು ಗಾದೆಮಾತು. ಕಷ್ಟ ಪಟ್ಟವನಿಗೆ, ಶ್ರಮಿಕನಿಗೆ ಸುಖವಿದೆ ಎಂಬುದು ಈ ಗಾದೆಯ ಅರ್ಥ. ಜಾತಿ, ಮತ ಮೌಢ್ಯಗಳ ಅಂಧಾನುಕರಣೆಯನ್ನು ಸಂಸ್ಕೃತಿ ಎಂದು ತಿಳಿದುಕೊಂಡ ಮುಗ್ಧರ ಶ್ರಮಕ್ಕೆ, ನೋವಿಗೆ ಬೆಲೆಯಿಲ್ಲ. ಶ್ರಮಿಕ ತನ್ನ ಶ್ರಮದ ಲಾಭವನ್ನು ಅನ್ಯರಿಗೆ ಕೊಟ್ಟು ನೋವನ್ನು ಅನುಭಸಿದ್ದಾನೆ. ಅನುಭವಿಸುತ್ತಲೂ ಇದ್ದಾನೆ. ಈ ನೋವು ಕಾಲದೇಶಗಳನ್ನು ದಾಟಿ ಹೋಗಿದೆಯಾದುದರಿಂದ ನೋವಿನ ವ್ಯಾಪ್ತಿ ಹಿರಿದಾದುದೆಂಬ ಲೇಖಕರ ಆಶಯವನ್ನು ತಿಳಿಸಿಕೊಡುವ ಪ್ರಯತ್ನ ಇಲ್ಲಿದೆ.

* * * *

ಪರೋಪಕಾರಾರ್ಥಂ ಇದಂ ಶರೀರಂ' ಎಂಬ ನುಡಿಯಂತೆ ಮನುಷ್ಯನ ಜೀವನ ಸಾರ್ಥಕವಾಗಲು ಆತನ ಬದುಕು ಹೇಗಿರಬೇಕೆಂಬ ಆಸೆ ಪ್ರತಿಯೊಬ್ಬರಲ್ಲೂ ಮೂಡುವುದು ಸಹಜ. ಹೀಗೆ ಬದುಕಿನ ಸಾರ್ಥಕತೆಯ ಆಸೆ ಕವಿಮನದ ಭಾವ ಇಲ್ಲಿ ಅರ್ಥಪೂರ್ಣವಾಗಿ ಮೂಡಿಬಂದಿದೆ.

## ೧. ಸಂಕಟಕೆ ಗಡಿ ಇಲ್ಲ

–ದು.ಸರಸ್ವತಿ

**ಅರ್ಥೈಸಿ ಓದಿ**

**ಹಮ್ಮು ಕಾದಾಟ ಮ್ಯಾಜಿಕ್ ವೀರಯೋಧ ಒಡಲು**

ಮಾನವ ಎಂಬೋನು
ಮಣ್ಣಿಗೆ 'ಮಾಲೀಕ'
ಆದನೆಂಬ 'ಮತಿನಲಿ'
ಗೆರೆ ಎಳೆದು 'ಗಡಿ'
ಎಂದ

ಹಮ್ಮಿನಲಿ 'ಬೀಗಲು'
ಕಾದಾಟದಾಟ ಆಡಿದ
ಜೀವಗಳು ಶವವಾದವು
ಗಡಿ ಆಚೆ–ಈಚೆ
ಎರಡೂ ಕಡೆ
ಹರಿದ ನೆತ್ತರೊಂದೆ
ಆದರೂ
ಗಡಿಯ 'ಮ್ಯಾಜಿಕ್'ನಿಂದ
ಜೀವತೆತ್ತವರು
'ವೀರಮರಣ' ಹೊಂದಿದರು
ಜೀವ ತೆಗೆದವರು
'ವೀರಯೋಧ'ರಾದರು

ಒಡಲು ಅನುಭವಿಸುವ
ಸಂಕಟಕೆ
ಗಡಿಯೂ ಇಲ್ಲ
ಆಚೆ ಈಚೆಯೂ ಇಲ್ಲ

## ಅರ್ಥೈಸಿ ಓದಿ

**ಬಲೆ ಬತ್ತಿ ವರತೆ ದಾಹ ಜೋಗುಳ ವಾಗ್ದೇವಿ ಮುಸ್ಸಂಜೆ ಊರುಗೋಲು**

ಗೆಲ್ಲಬೇಕು; ಬೀಸಲು ಬರುವ
ಬಲೆಯಿಂದ ಪಾರಾಗಬೇಕು
ತನ್ನನ್ನೇ ಸುಟ್ಟು –
ಬೆಳಕು ನೀಡುವ ಬತ್ತಿ ನಾನಾಗಬೇಕು.
ಮಣ್ಣಲ್ಲಿ ಮಣ್ಣಾಗಿ –
ಮಣ್ಣ ಮೇಲೊಂದು ಮರವಾಗಿ –
ಪುಣ್ಯವಂತರಿಗೆ ನೆರಳಾಗಬೇಕು.
ಬತ್ತದ ವರತೆ –
ಸದಾ ಚಿಮ್ಮುತ್ತಲಿರುವ ಚಿಲುಮೆ ನಾನಾಗಿ ;
ದಾಹಗೊಂಡವರ ತನುವ ತಣಿಸುವಂತಾಗಬೇಕು.
ಅಳುವ ಕಂದನ ನಗಿಸಲು
ಅಮ್ಮನ ಕಂಠದ ಜೋಗುಳ ನಾನಾಗಬೇಕು.
ಮಾನವನ ಅಜ್ಞಾನತೆ ತೊಲಗಿಸಲು –
ವಾಗ್ದೇವಿಯ ಕೈಯಲ್ಲಿಯ ಗ್ರಂಥ ನಾನಾಗಿ
ಧನ್ಯಳಾಗಬೇಕು...
ಮುಸ್ಸಂಜೆ ಹೊಸ್ತಿಲಲ್ಲಿ ದಿಕ್ಕಿಲ್ಲದೆ ನರಳಾಡುವ –
ದೀನರ ಊರುಗೋಲು ನಾನಾಗಬೇಕು....
ನೆಲಕ್ಕೆ ಬಿದ್ದು ಹೊರೆಯಾಗುವ ಮುನ್ನ
ಅಂತ್ಯ ನನ್ನದಾಗಬೇಕು.



## ಕರ್ತೃ–ಭಾವ–ಆಕರ



೧. **ದು. ಸರಸ್ವತಿ** ಅವರು (ಜನನ ೧೯೬೩) ದಲಿತ ಸಾಹಿತ್ಯ ಚಳವಳಿಯ ಪ್ರಮುಖ ಕವಯಿತ್ರಿ. ಬೆಂಗಳೂರಿನಲ್ಲಿ ನೆಲೆಸಿರುವ ಇವರು ರಂಗಕಲಾವಿದರಾಗಿ, ಸಮಾಜಸೇವಾಕರ್ತರಾಗಿ ದುಡಿಯುತ್ತಿದ್ದಾರೆ. **ಹೆಣೆದರೆ ಜೇಡನಂತೆ** ಮತ್ತು **ಜೀವಸಂಪಿಗೆ** ಎಂಬ ಕವನ ಸಂಕಲನಗಳನ್ನು **ಈಗೇನ್ಮಾಡೀರಿ?** ಎಂಬ ಅನುಭವ ಕಥನವನ್ನು ಪ್ರಕಟಿಸಿದ್ದಾರೆ.

ಪ್ರಪಂಚದಲ್ಲಿ ಎಲ್ಲ ಪ್ರಾಣಿಗಳಿಗೂ ಬದುಕುವ ಹಕ್ಕಿದೆ. ನಿಸರ್ಗಸಮತೋಲನದಲ್ಲಿ ಎಲ್ಲ ಸ್ತರದ ಜೀವಿಗಳೂ ಅನಿವಾರ್ಯ. ಬುದ್ಧಿಶಕ್ತಿ, ಮಾತಿನ ಶಕ್ತಿಯಿಂದ ಮೇಲಿನವನೆಂದುಕೊಂಡಿರುವ ಮಾನವ ತಾನೇ ಸರ್ವಾಧಿಕಾರಿ, ತನಗೆ ಮಾತ್ರ ಭೂಮಿಯ ಹಕ್ಕಿದೆ ಎಂದು ಭ್ರಮಿಸಿದ್ದಾನೆ. ಅದೇ ಅಹಂಕಾರದಿಂದ ಗಡಿಯನ್ನು ನಿರ್ಮಿಸಿಕೊಂಡು ಭೇದಭಾವದ ಅಸಮಾನತೆಯನ್ನು ಸೃಷ್ಟಿಸಿದ್ದಾನೆ. ಇದರಿಂದಾದ ಕಾದಾಟದಲ್ಲಿ ಎಷ್ಟೋ ಜೀವಗಳು ನಾಶವಾಗಿವೆ. ಇದರಿಂದಾದ ಪರಿಣಾಮದ ಅಂತರಂಗದ ನೋವನ್ನು ಯಾರೂ ಕೇಳುವವರಿಲ್ಲ. ಅದನ್ನು ಅನುಭವಿಸಿದವರಿಗೆ ಮಾತ್ರ ವೇದ್ಯವಾಗುವಂಥದ್ದು.

ದು. ಸರಸ್ವತಿ ವಿರಚಿತ **'ಹೆಣೆದರೆ ಜೇಡನಂತೆ'** ಕವನ ಸಂಕಲನದಿಂದ **'ಸಂಕಟಕೆ ಗಡಿ ಇಲ್ಲ'** ಕವಿತೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

* * * *



೨. **ಇಂದುಮತಿ ಲಮಾಣಿ** ಅವರು (ಜನನ ೧೯೫೫) ವಿಜಯಾಪುರ ಜಿಲ್ಲೆ **ಬರಟಗಿಯ ಮೂರನೇ ತಾಂಡಾದವರು,** ದಲಿತಸಾಹಿತ್ಯ ಪ್ರಕಾರದ ಪ್ರಮುಖ ಕವಯಿತ್ರಿ. ಬಂಜಾರ ಸೇವಾ ಸಂಘದ ಅಧ್ಯಕ್ಷರು, ಮಹಿಳಾ ಸ್ನೇಹಸಾಹಿತ್ಯಸಂಗಮ ಸಂಘದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಇವರಿಗೆ **'ಕಿತ್ತೂರು ರಾಣಿಚೆನ್ನಮ್ಮ ಪ್ರಶಸ್ತಿ'** (ಕರ್ನಾಟಕ ಸರ್ಕಾರ), **'ಡಾಟರ್ ಆಫ್ ನೈಲ್' ಪ್ರಶಸ್ತಿ** (ಟರ್ಕಿ), **ಮೈತ್ರೇಯಿ ಪ್ರಶಸ್ತಿ** (ಕುರ್ಜಾ), ಮುಂತಾದ ಅನೇಕ ಪ್ರಶಸ್ತಿಗಳು ಸಂದಿವೆ. **'ತಾಯಿಲೋಕ'** (ಕವನಸಂಕಲನ), **'ಭಾವಲೋಕ'** (ಜನಪದ ಕವನಸಂಕಲನ) **'ಏಕಾದಶ'** (ಕಥಾಸಂಕಲನ) **'ಕೊರಡು ಕೊನರುವುದು ಬರಡುಹಯನಹುದು'** (ಕಾದಂಬರಿ) ಮುಂತಾದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿ ಪ್ರಸಿದ್ಧರಾಗಿದ್ದಾರೆ.

ನಮ್ಮ ಜೀವನ ಚೈತನ್ಯದಾಯಕವಾಗಿಯೂ ಆನಂದಮಯವಾಗಿಯೂ ಇರಬೇಕಾದಲ್ಲಿ ನಿಸ್ವಾರ್ಥವಾದ ತ್ಯಾಗಜೀವನ ನಮ್ಮದಾಗಿರಬೇಕು. ನಾವು ಇನ್ನೊಬ್ಬರ ಪಾಲಿಗೆ ದಾರಿದೀಪವಾದಾಗ, ನಮ್ಮ ಜೀವನದಲ್ಲಿ **'ಸಾರ್ಥಕ್ಯವನ್ನು'** ಪಡೆಯಬಹುದು ಎಂಬುದು ಈ ಕವನದ ಆಶಯವಾಗಿದೆ.

**'ನನ್ನಾಸೆ'** ಕವನವನ್ನು ಇಂದುಮತಿ ಲಮಾಣಿ ಅವರ **'ನನ್ನ ಸುತ್ತಲಿನ ಸತ್ಯಗಳು'** ಎಂಬ ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ.



## ಪದ–ಅರ್ಥ

ಮಾಲೀಕ–ಯಜಮಾನ, ಮತ್ತು–ಅಮಲು, ಗಡಿ–ಎಲ್ಲೆ, ಹಮ್ಮು–ಗರ್ವ, ಬೀಗು–ಗರ್ವಪಡು, ಶವ–ಹೆಣ, ನೆತ್ತರು–ರಕ್ತ, ಮ್ಯಾಜಿಕ್–ಇಂದ್ರಜಾಲ, ಯೋಧ–ಸೈನಿಕ, ಒಡಲು–ಶರೀರ. ವರತೆ–ಚಿಲುಮೆ, ವಾಗ್ದೇವಿ–ಶಾರದೆ, ತೊಲಗಿಸು–ಹೋಗಲಾಡಿಸು, ತನು–ದೇಹ, ತಣಿಸು–ತೃಪ್ತಿಪಡಿಸು, ಪುಣ್ಯ(ತ್ಸ)–ಹೂನ್ಯ(ದ್ಭ).

## ಅಭ್ಯಾಸ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧. ಮಾನವ ಗಡಿಯನ್ನು ಹೇಗೆ ನಿರ್ಮಿಸಿಕೊಂಡ?
೨. ಮಾನವನ ಕಾದಾಟಕ್ಕೆ ಕಾರಣವೇನು?
೩. 'ಸಂಕಟಕೆ ಗಡಿ ಇಲ್ಲ' ಕಾವ್ಯದ ಆಕರಗ್ರಂಥ ಯಾವುದು?
೪. ಅಜ್ಞಾನ ತೊಲಗಿಸಲು ಕವಯಿತ್ರಿ ಏನಾಗ ಬಯಸಿದ್ದಾರೆ?
೫. ಸದಾ ಚಿಮ್ಮುವ ಚಿಲುಮೆಯಾಗಬೇಕು. ಏಕೆ?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ಗಡಿಯ ಆಚೆ–ಈಚೆ ಜೀವಿಗಳು ಏಕೆ ಶವವಾದವು?
೨. ನನ್ನಾಸೆ ಕವನದಲ್ಲಿ ಕವಯಿತ್ರಿಯವರ ಆಸೆಗಳೇನು? ವಿವರಿಸಿ.

ಇ. **ಎಂಟು–ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. **'ಸಂಕಟಕೆ ಗಡಿ ಇಲ್ಲ'** ಕವಿತೆಯ ಭಾವಾರ್ಥವನ್ನು ಹತ್ತು ವಾಕ್ಯಗಳಲ್ಲಿ ಬರೆಯಿರಿ.

೨. ಇಂದುಮತಿ ಲಮಾಣಿಯವರ ದೃಷ್ಟಿಯಲ್ಲಿ ಬಾಳು ಸಾರ್ಥಕಗೊಳ್ಳುವುದು ಹೇಗೆ?

ಈ. **ಸಂದರ್ಭ ಸಹಿತ ಸ್ವಾರಸ್ಯ ಬರೆಯಿರಿ.**

೧. "ಗೆರೆ ಎಳೆದು 'ಗಡಿ' ಎಂದ"

೨. "ಗಡಿಯೂ ಇಲ್ಲ ಆಚೆ ಈಚೆಯೂ ಇಲ್ಲ."

೩. "ಪುಣ್ಯವಂತರಿಗೆ ನೆರಳಾಗಬೇಕು."

೪. "ದೀನರ ಊರುಗೋಲು ನಾನಾಗಬೇಕು."

ಉ. **ಬಿಟ್ಟ ಸ್ಥಳವನ್ನು ಸೂಕ್ತ ಪದದಿಂದ ತುಂಬಿ.**

೧. ಮಾನವ ಎಂಬೋನು ______________ ಮಾಲೀಕ.

೨. ಸದಾ ಚಿಮ್ಮುತಲಿರುವ ______________ ನಾನಾಗಿ.

೩. ಅಮ್ಮನ ಕಂಠದ ______________ ನಾನಾಗಬೇಕು.

೪. ವಾಗ್ದೇವಿಯ ಕೈಯಲ್ಲಿಯ ______________ ನಾನಾಗಿ ಧ್ವನ್ಯಳಾಗಬೇಕು.

## ಸೈದ್ಧಾಂತಿಕ ಭಾಷಾಭ್ಯಾಸ

### ಅರ್ಥಾಂತರನ್ಯಾಸಾಲಂಕಾರ

**ಈ ವಾಕ್ಯಗಳನ್ನು ಗಮನಿಸಿ –**

ಆತನು ಪರೀಕ್ಷೆಯಲ್ಲಿ ಪ್ರಥಮಸ್ಥಾನ ಪಡೆದು ಉತ್ತೀರ್ಣನಾದನು. ಬುದ್ಧಿವಂತರಾದ ಮಕ್ಕಳಿಗೆ ಪರೀಕ್ಷೆಯೊಂದು ಲೆಕ್ಕವೇ?

ಇಲ್ಲಿ 'ಆತನು ಪರೀಕ್ಷೆಯಲ್ಲಿ ಪ್ರಥಮಸ್ಥಾನ ಪಡೆದು ಉತ್ತೀರ್ಣನಾದನು' ಎಂಬ **ವಿಶೇಷವಾಕ್ಯವನ್ನು** (ಉಪಮೇಯ) ಲೋಕದಲ್ಲಿ ಎಲ್ಲ ಬುದ್ಧಿವಂತ ಮಕ್ಕಳಿಗೆ ಅನ್ವಯವಾಗುವಂತಹ 'ಬುದ್ಧಿವಂತರಾದ ಮಕ್ಕಳಿಗೆ ಪರೀಕ್ಷೆಯೊಂದು ಲೆಕ್ಕವೆ? ಎಂಬ **ಸಾಮಾನ್ಯವಾಕ್ಯದಿಂದ** (ಉಪಮಾನ) ಸಮರ್ಥಿಸಲಾಗಿದೆ. ಹೀಗೆ –

**ಒಂದು ವಿಶೇಷ ವಾಕ್ಯವನ್ನು ಸಾಮಾನ್ಯ ವಾಕ್ಯದಿಂದ ಅಥವಾ ಸಾಮಾನ್ಯವಾಕ್ಯವನ್ನು ವಿಶೇಷವಾಕ್ಯದಿಂದ ಸಮರ್ಥನೆಮಾಡುವುದೇ ಅರ್ಥಾಂತರನ್ಯಾಸಾಲಂಕಾರವೆನಿಸುತ್ತದೆ.**

ಉದಾ : ಜಲನಿಧಿಜಲಮಂ ಜಲಭೃ ।
ತ್ಕುಲಕ್ಕೆ ನಲಿದಿತ್ತುದತ್ತಮಿತ್ತನದೀನಿ ।
ರ್ಮಲ ಸಲಿಲಂ ದೊರೆದುದು ಗಡ ।
ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ ॥

**ಉಪಮೇಯ (ವಿಶೇಷವಾಕ್ಯ)** : ಜಲನಿಧಿ ಜಲಮಂ ಜಲಭೃತ್ಕುಲಕ್ಕೆ ನಲಿದಿತ್ತುದು ; ಇತ್ತ ನದೀನಿರ್ಮಲ ಸಲಿಲಂದೊರೆದುದು.' (ಸಮುದ್ರವು ನೀರನ್ನು ಮೋಡಗಳಿಗೆ ನೀಡಿತು; ಮೋಡದಿಂದ ಮಳೆಸುರಿದು ನದಿಗಳಲ್ಲಿ ತುಂಬಿ ಪುನಃ ಸಮುದ್ರಕ್ಕೆ ಹೋಯಿತು.)

| | |
|---|---|
| **ಉಪಮಾನ (ಸಾಮಾನ್ಯ ವಾಕ್ಯ)** | : 'ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ' (ಲೋಕದಲ್ಲಿ ಕೊಟ್ಟವನಿಗೆ ಬಡತನ ಬರುವುದಿಲ್ಲ) |
| **ಸಮನ್ವಯ** | : 'ಇಲ್ಲಿಜಲನಿಧಿಜಲಮಂ ಜಲಭೃತ್ಕುಲಕ್ಕೆ ನಲಿದಿತ್ತುದು; ಇತ್ತ ನದೀ ನಿರ್ಮಲ ಸಲಿಲಂ ದೊರೆದುದು' ಎಂಬ **ಉಪಮೇಯ** ವಾಕ್ಯವನ್ನು ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ' ಎಂಬ **ಉಪಮಾನ** ವಾಕ್ಯದಿಂದ ಸಮರ್ಥನೆ ಮಾಡಿರುವುದರಿಂದ ಇದನ್ನು **ಅರ್ಥಾಂತರನ್ಯಾಸಾಲಂಕಾರ** ಎಂದು ಹೇಳಬಹುದು. |

## ಭಾಷಾ ಚಟುವಟಿಕೆ

೧. **ಸಮಾನಾರ್ಥಕ ಪದಗಳನ್ನು ಬರೆಯಿರಿ.**
ಮತ್ತು, ಹಮ್ಮು, ನೆತ್ತರು, ವರತೆ, ಗ್ರಂಥ, ತನು

೨. **ಕೊಟ್ಟಿರುವ ಪದಗಳಲ್ಲಿರುವ ವಿಭಕ್ತಿ ಪ್ರತ್ಯಯಗಳನ್ನು ಬರೆಯಿರಿ.**
ಮಣ್ಣಿಗೆ, ಮ್ಯಾಜಿಕ್‌ನಿಂದ, ಯೋಧನು, ಆಡಿದ, ಕೈಯಲ್ಲಿ, ತನ್ನನ್ನು

೩. **ಸ್ವಂತ ವಾಕ್ಯದಲ್ಲಿ ಬಳಸಿ.**
ವೀರಮರಣ, ಆಚೆ-ಈಚೆ, ವೀರಯೋಧ, ಕಾದಾಟ, ಊರುಗೋಲು, ತೊಲಗಿಸು

೪. **ಸಂಧಿವಿಂಗಡಿಸಿ ಹೆಸರಿಸಿ.**
ಕಾದಾಟದಾಟ, ಆದನೆಂಬ, ಶವವಾದವು, ಜೀವತೆತ್ತವರು, ವಾಗ್ದೇವಿ, ಊರುಗೋಲು, ಹೊರೆಯಾಗು



## ಚಟುವಟಿಕೆ

**ಕೆಳಗಿನ ಪದ್ಯಭಾಗವನ್ನು ಕಂಠಪಾಠ ಮಾಡಿ.**

೧. ಹಮ್ಮಿನಲಿ ............................................................................ ವೀರಯೋಧರಾದರು

೨. ಸಧಾ ............................................................................ ಧನ್ಯಳಾಗಬೇಕು.

## ಹೆಚ್ಚಿನ ಓದು

೧. ದು. ಸರಸ್ವತಿ ವಿರಚಿತ ಕವಿತೆಗಳನ್ನು ಸಂಗ್ರಹಿಸಿ ಓದಿ.

೨. ಮೂಡ್ನಾಕೂಡು ಚಿನ್ನಾಸ್ವಾಮಿಯವರ 'ಎಲುಬಿನ ಹಂದರದೊಳಗೆ' ಕವನ ಓದಿರಿ.

* * * * *

**ಪಠ್ಯಪೋಷಕ ಅಧ್ಯಯನ**

## ಪೋಷಕ ಪಾಠ – ೦೧

# ವಿಜ್ಞಾನ ಮತ್ತು ಸಮಾಜ

– ಎಚ್. ನರಸಿಂಹಯ್ಯ

'ವಿಜ್ಞಾನದ ಯಾವುದೇ' ವಿಭಾಗ ಸಮಾಜದ ಒಳಿತಿಗಾಗಿ ನೆರವಾಗಬಲ್ಲದು. ವಿಶೇಷವಾಗಿ ರಸಾಯನಶಾಸ್ತ್ರ ಜೀವನದ ಅನೇಕ ಕ್ಷೇತ್ರಗಳಲ್ಲಿ ಬಳಕೆಯಾಗಿರುವುದು ಕಂಡುಬರುತ್ತದೆ. ರಾಸಾಯನಿಕ ಕ್ರಿಯೆಗಳಿಲ್ಲದ ಕಾರ್ಯಗಳೇ ಅಪರೂಪ. ವಿಜ್ಞಾನದ ಈ ವಿಭಾಗದಲ್ಲಿ ಆಳವಾದ ಸಂಶೋಧನೆಗಳು ನಡೆದು ಮನುಕುಲದ ಪ್ರಗತಿಗೆ(ಏಳಿಗೆಗೆ) ಕಾರಣೀಭೂತವಾಗಬೇಕಾಗಿದೆ.

ವಿಜ್ಞಾನಿಗಳು ತಮ್ಮ ಅಮೂಲ್ಯವಾದ ಜ್ಞಾನವನ್ನು ಸಾಮಾನ್ಯ ಜನರ ಮನೋಭಾವಗಳನ್ನು ತಿದ್ದುವ ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕು. ಸಮಾಜದ ಸುಧಾರಣೆಗೆ ನೆರವಾಗಬೇಕು. ವಿಜ್ಞಾನಿಯ ವರ್ತನೆ, ಮನೋಭಾವ ಅವನು ದಂತಗೋಪುರದಲ್ಲಿರುವ ಅಪೂರ್ವಬುದ್ಧಿಶಾಲಿ ಎಂಬ ಭಾವನೆ ಜನರಲ್ಲಿ ಮೂಡುವಂತಿರಬಾರದು. ಸಮಾಜದ ದುಡಿಮೆಯಲ್ಲಿ ಶಿಕ್ಷಣವನ್ನು ಪಡೆದಿರುವ ವಿಜ್ಞಾನಿ, ಸಾಮಾನ್ಯ ಜನರ ಯೋಚನಾಶಕ್ತಿಯನ್ನು ಬೆಳೆಸುವಲ್ಲಿ ಶ್ರಮಿಸುವುದು ಆತನ ಕರ್ತವ್ಯವೇ ಹೊರತು ಉಪಕಾರವೇನೂ ಅಲ್ಲ. ವಿಶೇಷ ಸಂದರ್ಭಗಳಲ್ಲಿ ಜನಪ್ರಿಯ ಉಪನ್ಯಾಸಗಳನ್ನೂ, ವಿಜ್ಞಾನ ಪ್ರದರ್ಶನಗಳನ್ನೂ ಏರ್ಪಡಿಸಿದರೆ ವಿಜ್ಞಾನ ವಿಷಯದಲ್ಲಿ ಆಸಕ್ತರಾಗಿರುವ ಬಹು ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಸಹಾಯವಾಗುತ್ತದೆ.

ನಮ್ಮ ದೇಶದಲ್ಲಿ ವಿಜ್ಞಾನಿಗಳು ಹಲವಾರು ಸಂದರ್ಭಗಳಲ್ಲಿ ಪರಸ್ಪರ ವೈರುಧ್ಯದ ಮನೋಭಾವವನ್ನು ವ್ಯಕ್ತಪಡಿಸುತ್ತಿರುವುದು ದುರದೃಷ್ಟಕರ. ಅವರು ಪ್ರಯೋಗಶಾಲೆಗಳಲ್ಲಿ ತಮ್ಮ ಹೆಚ್ಚಿನ ವಿಚಾರಶಕ್ತಿಯನ್ನೂ, ವೈಜ್ಞಾನಿಕ ಮನೋಭಾವವನ್ನೂ ಪ್ರದರ್ಶಿಸುತ್ತಾರೆ. ಆದರೆ ಅದು ನಿಜ ಜೀವನದಲ್ಲಿ ಅವರ ಯೋಚನಾಶಕ್ತಿ 'ರಜೆ' ತೆಗೆದುಕೊಂಡಿದೆಯೋ ಎಂಬಂತೆ ಅವೈಜ್ಞಾನಿಕವಾಗಿ ವರ್ತಿಸುತ್ತಾರೆ. ಒಂದೇ ಮನಸ್ಸು ಒಮ್ಮೆ ತಾರ್ಕಿಕವಾಗಿ ಚಿಂತಿಸಿದರೆ ಮತ್ತೊಮ್ಮೆ ಅತಾರ್ಕಿಕವಾಗಿ ಯೋಚಿಸುತ್ತದೆ. ಯೋಚನೆಯಲ್ಲಿ ಏಕಸೂತ್ರತೆ ಕಂಡುಬರುವುದಿಲ್ಲ.

ಅಧ್ಯಾಪಕ ತರಗತಿಯಲ್ಲಿ ಡಾರ್ವಿನ್ನನ ಸಿದ್ಧಾಂತವನ್ನು ವೈಜ್ಞಾನಿಕವಾಗಿ ಬೋಧಿಸುತ್ತಾನೆ. ಆದರೆ ಅದೇ ವ್ಯಕ್ತಿ ಚರ್ಚಿನಲ್ಲಿ ಅಥವಾ ದೇವಸ್ಥಾನದಲ್ಲಿ ಯಾವುದೇ ಸಂಕೋಚವಿಲ್ಲದೆ ವಿಜ್ಞಾನಕ್ಕೆ ಅಸಂಗತವಾದ ವಿಕಾಸವಾದವನ್ನು ನಂಬಿಕೆಯ ಮೂಲಕ ಬೋಧಿಸುತ್ತಾನೆ. ಮನುಷ್ಯ ಯಶಸ್ವಿಯಾಗಿ ಚಂದ್ರನನ್ನು ತಲುಪಿ ಬಂದಿದ್ದಾನಾದರೂ ಪ್ರಕೃತಿಯಲ್ಲಿ ಸಹಜವಾಗಿ ಘಟಿಸುವ ಗ್ರಹಣದ ಬಗ್ಗೆ ತರಗತಿಯಲ್ಲಿ ಒಂದು ವಿಧದ ಬೋಧನೆಯನ್ನು ಮಾಡಿದರೆ, ಮನೆಯಲ್ಲಿ ಮತ್ತೊಂದು ವಿಧದ ಆಚರಣೆಯನ್ನು ಅನುಸರಿಸುತ್ತಾನೆ. ಬಹುತೇಕ ವಿಜ್ಞಾನಿಗಳು ಪಾಠ ಹೇಳುತ್ತಾ ಹಸ್ತಸಾಮುದ್ರಿಕೆಯನ್ನು ನಂಬುವುದೂ ಉಂಟು.

ವಿಜ್ಞಾನಿಯೊಬ್ಬನ ವಸ್ತುಸ್ಥಿರತೆಯ ವಿಶ್ವನಿಯಮ ಸಮಾಜದ ಕೆಲವರಿಗೆ ಮಾತ್ರ ಅನ್ವಯಿಸುವುದಿಲ್ಲವೆಂದರೆ ಅದು ಶತಮೂರ್ಖತನ. ಕೈಗಡಿಯಾರವೊಂದು ಶೂನ್ಯದಲ್ಲಿ ಸೃಷ್ಟಿಯಾಗುತ್ತದೆ ಎನ್ನುವುದು ಮೂರ್ಖತನದ ಪರಮಾವಧಿಯಲ್ಲವೇ? ಅಶಿಕ್ಷಿತನೊಬ್ಬ ಹೀಗೆ ಹೇಳಿದರೆ ಅವನನ್ನು ಕ್ಷಮಿಸಬಹುದು. ಆದರೆ ವಿದ್ಯಾವಂತರೂ ಸಹ ಈ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದು ಶೋಚನೀಯ. ಇದು ನಿಜವಾದರೆ, ಜಗತ್ತಿನ ವಿಜ್ಞಾನಕ್ಷೇತ್ರದಲ್ಲಿ ನಡೆದಿರುವ ಎಲ್ಲ ಶೋಧನೆಗಳೂ ಅರ್ಥರಹಿತವಾಗುತ್ತವೆ.

ನಮ್ಮ ದೇಶದಲ್ಲಿ ಮೂಢನಂಬಿಕೆಗಳು ತುಂಬಿ ತುಳುಕುತ್ತಿವೆ. ಈ ಮೂಢನಂಬಿಕೆಗಳನ್ನು ಪ್ರತಿಪಾದಿಸುವ ವಿದ್ಯಾವಂತನು ಮೂಢನಂಬಿಕೆಯನ್ನು ಹೊಂದಿರುವ ಅವಿದ್ಯಾವಂತನಿಗಿಂತಲೂ ಹೆಚ್ಚು ಅಪಾಯಕಾರಿ. ಈ ಗುಂಪಿನಲ್ಲಿ ಪ್ರಸಿದ್ಧ ಶಿಕ್ಷಣವೇತ್ತರೂ ಇದ್ದಾರೆ ಎನ್ನುವುದು ಖಂಡನಾರ್ಹ. ಮೂಢನಂಬಿಕೆಗಳ ಬಗ್ಗೆ ತಳೆಯುವ ಉದಾಸೀನಭಾವ ಮತ್ತು ನಿಷ್ಕ್ರಿಯತೆ ಸಮಾಜಕ್ಕೆ ತುಂಬಾ ಹಾನಿಯನ್ನುಂಟುಮಾಡುತ್ತದೆ. ಈ ರೀತಿಯ ತಟಸ್ಥ ಮನೋಭಾವ, ಅರ್ಥಹೀನ ಹಾಗೂ ಅವೈಜ್ಞಾನಿಕ ವಿಚಾರಗಳಿಗೆ ಪರೋಕ್ಷವಾಗಿ ಸಮರ್ಥನೆ ಕೊಟ್ಟಂತೆ ಆಗುತ್ತದೆ. ಅಲ್ಲದೆ **ಮೌನ** ಸಮ್ಮತಿಯ ಲಕ್ಷಣ ಆಗಿಬಿಡಬಹುದು.

ಪ್ರಚಲಿತ ವೈಜ್ಞಾನಿಕ ನಿಯಮಗಳನ್ನು ಮೀರುವ ಪವಾಡಗಳ ಬಗ್ಗೆ ವಿಜ್ಞಾನಿಗಳು ಪ್ರಬಲವಾಗಿ ವಿರೋಧಿಸಿ ಅಂತ ಪವಾಡಗಳ ಕೆಡುಕನ್ನೂ ತಪ್ಪಿಸಬೇಕು. ಪ್ರತಿಯೊಂದು ಮೂಢನಂಬಿಕೆಯೂ ಪರಿಶೀಲನೆಯ ಮೂಲಕ ನಿರಾಕರಣವಾಗಬೇಕು. ಭಯ ಮತ್ತು ಅಜ್ಞಾನಗಳಿಂದ ರೂಪಿತವಾಗಿರುವ ಮೂಢನಂಬಿಕೆಗಳು ಆತ್ಮವಿಶ್ವಾಸವನ್ನು, ಸ್ವತಂತ್ರ ಆಲೋಚನೆಗಳನ್ನು ಮೊಟಕುಗೊಳಿಸುತ್ತವೆ. ಮಾಟಮಂತ್ರದಂತಹ ಪ್ರಗತಿ ವಿರೋಧಿ ಚಟುವಟಿಕೆಗಳು ನಮ್ಮ ಸಮಾಜಕ್ಕೆ ಹೆಚ್ಚಿನ ಆಘಾತವನ್ನು ಉಂಟುಮಾಡಿವೆ.

ಪವಾಡ, ಮೂಢನಂಬಿಕೆ, ಮಾಟಮಂತ್ರ ಮುಂತಾದುವುಗಳ ಬಗ್ಗೆ ವಿಜ್ಞಾನದ ಸಭೆ, ಸಮ್ಮೇಳನಗಳಲ್ಲಿ ಚರ್ಚಿಸಬೇಕು. ಸಮಾಜದ ಮೇಲೆ ಪ್ರಭಾವ ಬೀರುತ್ತಿರುವ ಸಮಸ್ಯೆಗಳಿಂದ ವಿಜ್ಞಾನಿಗಳು ವಿಮುಖರಾಗಿರುವುದು ಸಾಧ್ಯವಿಲ್ಲ. ವಿಜ್ಞಾನಿ ತನ್ನ ಶೋಧನೆಯ ಪರಿಧಿಯನ್ನು ವಿಸ್ತರಿಸಿಕೊಳ್ಳಬೇಕು. ಸಂಶೋಧನೆ ನಾಲ್ಕು ಗೋಡೆಗಳ ಮಧ್ಯಕ್ಕೆ ಸೀಮಿತವಾಗಿರದೆ ಜನರ ನಿತ್ಯಜೀವನದ ಸಮಸ್ಯೆಗಳೂ ಆತನ ಸಂಶೋಧನಾ ಕ್ಷೇತ್ರವಾಗಬೇಕು. ಹಲವಾರು ಅತಾರ್ಕಿಕವಾದ ನಡಾವಳಿಗಳಿಂದ ಸಮಾಜ ಅನ್ಯಾಯಕ್ಕೆ ಒಳಪಟ್ಟಿದ್ದು ಉಸಿರುಕಟ್ಟುವ ವಾತಾವರಣವಿದೆ. ಅದನ್ನು ಶುದ್ಧಗೊಳಿಸುವಲ್ಲಿ ವಿಜ್ಞಾನಿಗಳು ಇನ್ನೂ ಪ್ರಯತ್ನಿಸದೇ ಇರುವುದು ಸರಿಯಲ್ಲ.

ವಿಜ್ಞಾನದ ಫಲಿತಗಳ ಬಗ್ಗೆ ಹೆಚ್ಚಿನ ಆದ್ಯತೆ ಕೊಡುವುದು ವಿಜ್ಞಾನಿಗಳಲ್ಲಿ ಹಾಗೂ ಸಮಾಜದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಆದರೆ ನನ್ನ ಅಭಿಪ್ರಾಯದಲ್ಲಿ ವಿಜ್ಞಾನದ ಮೂಲ ಉದ್ದೇಶಗಳೂ ಸಹ ಅಷ್ಟೇ ಮುಖ್ಯವೆಂದು ಪರಿಗಣಿಸಬೇಕಾದುದು ಅನಿವಾರ್ಯ. ವಿಜ್ಞಾನದ ನೆಲೆ ಅಪರಿಮಿತ ವಿಷಯಸಂಗ್ರಹ ಮತ್ತು ಅಂಶಗಳಿಗಷ್ಟೇ ಸೀಮಿತವಾಗಿರದೆ, ವೈಜ್ಞಾನಿಕ ಮನೋಧರ್ಮದ ತಳಹದಿಯ ಮೇಲೆ ನಿಲ್ಲಬೇಕು. ವೈಜ್ಞಾನಿಕ ಮನೋಧರ್ಮ, ವಿಚಾರಗಳು ಪಠ್ಯಗಳಲ್ಲಿ ಸೇರ್ಪಡೆಯಾಗಬೇಕು. ಎಲ್ಲ ವಿಜ್ಞಾನದ ಅಧ್ಯಾಪಕರೂ ವೈಜ್ಞಾನಿಕ ಮನೋಧರ್ಮವನ್ನು ಮೊದಲು ತಮ್ಮಲ್ಲಿ ರೂಢಿಸಿಕೊಳ್ಳುವುದರ ಜೊತೆಗೆ ವ್ಯಾಪಕವಾಗಿ ಪ್ರಚಾರ ಮಾಡಬೇಕು. ನಮ್ಮ ದೇಶ ನೂರಾರು ವರ್ಷಗಳಿಂದ ಎದುರಿಸುತ್ತಿರುವ ಜಟಿಲಾತಿಜಟಿಲವಾದ ಸಮಸ್ಯೆಗಳನ್ನೂ ಸಹ ವೈಜ್ಞಾನಿಕಮಾರ್ಗಗಳಿಂದ ಪರಿಹರಿಸಲು ಸಾಧ್ಯ. ನಮ್ಮ ಸಮಾಜ ಎದುರಿಸುತ್ತಿರುವ ಜಾತಿಯಂತಹ ಸಾಮಾಜಿಕ ಪಿಡುಗುಗಳ ಪರಿಹಾರವೂ ಸಹ ವಿಜ್ಞಾನ ಮತ್ತು ವೈಜ್ಞಾನಿಕ ಮನೋಭಾವಗಳಿಂದ ಸಾಧ್ಯ. ಆಗ ಮಾತ್ರ ಮಾನವೀಯ ಮೌಲ್ಯ ಹಾಗೂ ನೀತಿಯಾಧಾರಿತ ವಿಶ್ವಧರ್ಮ ರೂಪಿತವಾಗಬಲ್ಲುದು. ಧರ್ಮ

ನೀತಿ ಸ್ವರೂಪವನ್ನು ಹೊಂದಿರುವಂತಹದು. ಈ ರೀತಿಯ ಧರ್ಮ ರಾಷ್ಟ್ರೀಯತೆಯ ಮೂಲವಾದ ಬೇಲಿಯನ್ನು ದಾಟಿ ಸ್ಥಾಪಿತವಾಗಬೇಕಾದರೆ ವಿಶ್ವಮಾನ್ಯತೆಯುನ್ನು ಹೊಂದಿರುವ ವಿಜ್ಞಾನದ ತತ್ವಗಳನ್ನು ಅನ್ವಯಿಸಿಕೊಳ್ಳುವುದರಿಂದ ಮಾತ್ರ ಸಾಧ್ಯವಾಗುತ್ತದೆ.

ವಿಜ್ಞಾನ ಮತ್ತದರ ಬಳಕೆ ಹಾಗೂ ವೈಜ್ಞಾನಿಕ ಮನೋಧರ್ಮವನ್ನು ಪಡೆದು ಕಾರ್ಯಪ್ರವೃತ್ತರಾದಾಗ ಮಾತ್ರ ಬಡತನ ನಿರ್ಮೂಲನ ಮತ್ತು ಶೋಷಣೆಗಳ ನಾಶ ಸಾಧ್ಯ. ಅದು ಪ್ರಗತಿವಿರೋಧೀ ಸಿದ್ಧಾಂತಗಳನ್ನೂ ಸ್ವಹಿತಾಸಕ್ತಿಯನ್ನೂ ದೂರಮಾಡಬಲ್ಲುದು. ವಿಜ್ಞಾನಿಗಳಾದವರಿಗೆ ವಿಜ್ಞಾನ ಜೀವನೋಪಾಯಕ್ಕೆ ಮಾರ್ಗವಾಗಿರದೆ ಅದರಲ್ಲಿಯೇ ಜೀವಂತ ನಂಬಿಕೆ ಹೊಂದಬೇಕು. ಅಂತೆಯೇ ತರ್ಕಬದ್ಧವಾಗಿ, ಧೈರ್ಯದಿಂದ ವರ್ತಿಸಬೇಕು. ಹಾಗಾದಾಗ ಮಾತ್ರ ಸಮಾಜದ ಸುಧಾರಣೆ ಸಾಧ್ಯ.

## ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಒಂದು–ಎರಡು ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. ವಿಜ್ಞಾನಿಗಳ ವೈರುಧ್ಯ ಭಾವನೆಯನ್ನು ವಿವರಿಸಿರಿ.

೨. ವೈಜ್ಞಾನಿಕ ಸಂಶೋಧನೆಗಳು ಯಾವಾಗ ಅರ್ಥರಹಿತವಾಗುತ್ತವೆ?

೩. ಲೇಖಕರ ಪ್ರಕಾರ 'ವಿಶ್ವಧರ್ಮ' ಯಾವಾಗ ರೂಪಿತವಾಗಬಲ್ಲುದು?

೪. ಸಮಾಜಸುಧಾರಣೆ ಯಾವಾಗ ಸಾಧ್ಯವೆಂದು ಲೇಖಕರು ವಿವರಿಸಿದ್ದಾರೆ?



✻ ✻ ✻ ✻ ✻

## ಪೋಷಕ ಪಾಠ – ೦೨

# ನಾಮಫಲಕ

– ಆರ್. ನಿರ್ಮಲ

ನಮ್ಮ ಮನೆಯ ಮುಂಗೋಡೆಯ ಮೇಲೊಂದು ಪುಟ್ಟ ನಾಮಫಲಕವಿದೆ. ಅದರ ಮೇಲೆ 'ಇವರ' ಹೆಸರಿದೆ. ನಮ್ಮ ಮದುವೆಗೆ ಮುನ್ನ ಇವರು ಮಾಡಿಸಿಕೊಂಡದ್ದು ಅದು. ಬಾಡಿಗೆ ಮನೆಯ ಕಿಟಕಿಯ ಅಡ್ಡ ಸರಳಿನ ಮೇಲೆ ಹಲವಾರು ವರ್ಷ ನೇತಾಡಿಕೊಂಡಿದ್ದು ಇತ್ತೀಚೆಗೆ ನಮ್ಮ ಪುಟ್ಟಗೂಡು ಕಟ್ಟಿಕೊಂಡು, ಮಕ್ಕಳು ಮರಿಯ ಜೊತೆ ಅದರಲ್ಲಿ ನೆಲೆನಿಂತಾಗ, ನಮ್ಮೊಡನೆಯೇ ಅದೂ ಬಂದು ಈಗಿಲ್ಲಿ ಮುಂಗೋಡೆಯ ಮೇಲು ಅಂಚಿನಲ್ಲಿ ತಳವೂರಿದೆ.

ನಾನೆಂದೂ ನನ್ನ ಹೆಸರಿನ ಇಂಥದೊಂದು ಫಲಕ ಬರೆಸಬೇಕೆಂದು ಆಸೆಪಟ್ಟವಳಲ್ಲ. ಏಕೆನ್ನುವಿರೋ? ಈ ಮನೆಯಲ್ಲಿ ಅತ್ತೆಯವರ ನಾಮಫಲಕವೆಲ್ಲೂ ಇಲ್ಲ. ಇನ್ನು 'ಸೊಸೆಯ ಮುದ್ದಿನ' ಹೆಸರಿನ ಹಲಗೆಯ ಅಗತ್ಯವೇನಿದೆ? ಅಷ್ಟೇ ಅಲ್ಲ. ನಮ್ಮಪ್ಪ ಮತ್ತು ಮಾವ ಕೂಡ ತಾವು ಕಟ್ಟಿದ ಮನೆಯ ಮೇಲೆಲ್ಲೂ ತಮ್ಮ ಹೆಸರಿನ ಹಲಗೆಯನ್ನು ತೂಗು ಬಿಟ್ಟಿರಲಿಲ್ಲ. ನಮ್ಮ ಹಿಂದಿನ ತಲೆಮಾರಿನ ಜನಸಾಮಾನ್ಯರು (ಶ್ರೀಸಾಮಾನ್ಯರೆಂದು ಕುವೆಂಪು ಅವರು ಹೆಸರಿಟ್ಟಿದ್ದಾರೆ) ತಲೆಗೊಂದು ಸೂರು ಬೇಕೆಂದು ಬಯಸುತ್ತಿದ್ದರೇ ವಿನಾ ಸೂರಿಗೊಂದು ಹೆಸರೂ ಬೇಕೆಂದು ಆಸೆಪಡುತ್ತಿರಲಿಲ್ಲ.

ಮನೆಗೆ ಹೆಸರಿಡುವುದು ದೂರ ಉಳಿಯಿತು. ಮನೆಯಲ್ಲಿ ಒಂದು ಕೂಸು ಹುಟ್ಟಿದರೂ ಹೆಸರು ಹುಡುಕುತ್ತಿದ್ದರೇ ಹೇಳಿ. ಅವರಿಗೆ ಹೆಸರಿನ ಅಗತ್ಯವೇ ಕಾಣುತ್ತಿರಲಿಲ್ಲ. ತಾತನ ಹೆಸರನ್ನು ಮೊಮ್ಮಗನಿಗೆ ಇಟ್ಟರಾಯಿತು. ಮೊಮ್ಮಗಳಿಗೆ ಹೇಗೂ ಅಜ್ಜಿಯ ಹೆಸರಿದ್ದೇ ಇದೆ. ಮನೆ ದೇವರ ಹೆಸರೂ ಅಜ್ಜ-ಅಜ್ಜಿಯ ಹೆಸರೂ ಸಮನ್ವಯಗೊಂಡೇ ಇರುತ್ತಿತ್ತು. ಮತ್ತೇಕೆ ಹೊಸ ಹೆಸರು?

ಈಗ ಎಲ್ಲೆಲ್ಲೂ ಹೊಸತನದ ಗಾಳಿ. ಮಕ್ಕಳಿಗೆ ಹೊಸ ಹೆಸರು ಬೇಕು. ತಮ್ಮ ಮನೆಗೊಂದು ಹೆಸರು ಬೇಕು. ಅದಕ್ಕೊಂದು ಒಳ್ಳೆಯ ನಾಮಫಲಕವೂ ಬೇಕು. ಯಾರೂ ಇಟ್ಟಿರದ ಹೆಸರಾಗಬೇಕು. ಕರೆಯಲು ಮುದ್ದಾಗಿರಬೇಕು. ತುಂಬ ಚಿಕ್ಕದಾಗಿರಬಾರದು, ತುಂಬ ಉದ್ದವೂ ಇರಬಾರದು. ನೋಡಿ ತಮ್ಮ ಆವಶ್ಯಕತೆಗಳು ಹೇಗೆ ಹಿಗ್ಗುತ್ತಿವೆ.

ಮನೆಗೆ ಹೆಸರಿಡುವಾಗ ಶ್ರೀಕೃಪ, ಹರಿಕೃಪ, ಶ್ರೀನಿವಾಸ, ಲಕ್ಷ್ಮೀನಿವಾಸ, ಆನಂದಭವನ, ಶ್ರೀನಿಲಯ, ದರ್ಶಿನಿ, ದೀಪ, ಕುಟೀರ ಇಂತವುಗಳಿಗೆ ಮೊದಲ ಸ್ಥಾನ. ಇವೆಲ್ಲ ಸಂಸ್ಕೃತ ಮೂಲದವು. ಕನ್ನಡದ ಮೇಲಿನ ಅಭಿಮಾನದಿಂದ 'ಗೃಹ ಪ್ರವೇಶ' ಮಾಡಲು ಇಷ್ಟಪಡದೆ 'ಮನೆಯೊಕ್ಕಲು' ಮಾಡಿ ಅಚ್ಚಗನ್ನಡದ ಹೆಸರಿನ ಮನೆಯಲ್ಲಿ ವಾಸ ಮಾಡುವ ಕನ್ನಡಿಗರನ್ನು ಮೆಚ್ಚಲೇಬೇಕು.'ನೆಲೆ, ನೆರಳು, ಚುಕ್ಕಿ, ಬೆಳಕು, ಹಸಿರು, ಹಂದರ, ಮಲ್ಲಿಗೆ, ಸಂಪಿಗೆ' ಇವು ಚಂದದ ಹೆಸರೇ ಹೌದು. ಆದರೆ ಕಲ್ಪತರು ಎಂದು ಮನೆಗಿಟ್ಟ

ಹೆಸರನ್ನು 'ತೆಂಗಿನಮರ' ಎಂದು ಕನ್ನಡಿಸಬಾರದು ಅಷ್ಟೆ. ನಾಮಪದಗಳನ್ನು ಅನ್ಯಭಾಷೆಗೆ ಅನುವಾದಿಸಬಾರದೆಂಬ ನಿಯಮವನ್ನು ಪಾಲಿಸುವುದು ಒಳ್ಳೆಯದು. ಕಿಟ್ಟಲ್ ಅವರನ್ನು ಕಿತ್ತೀಳೆ ಎಂದೂ, ಷೇಕ್ಸ್‌ಪಿಯರ್‌ನನ್ನು ಷೇಕಪ್ರಿಯನೆಂದೂ ಕನ್ನಡಕ್ಕೆ ಅನುವಾದಿಸಿದರೆ ಈಗ ಯಾರೂ ಒಪ್ಪುವುದಿಲ್ಲ. ಕೆಲವರಿಗೆ ತಮ್ಮ ಮೂಲಸ್ಥಳದ ಹೆಸರನ್ನು ಮನೆಯ ಮೇಲೆ ಉಳಿಸಿಕೊಳ್ಳುವ ತವಕ. ಕೆಲವರಿಗೆ ತಮ್ಮೂರ ಬೆಟ್ಟದ, ಹೊಳೆಯ ಚೆಲುವನ್ನು ಮನೆಯ ಹೆಸರಾಗಿಸುವ ಬಯಕೆ.

ಮನೆಗೊಂದು ಹೆಸರನ್ನು ಹುಡುಕುವ ಕೆಲಸ ಮುಗಿಸಿದರೆ, ಅದನ್ನೊಂದು ಚೆಂದದ ಫಲಕದಲ್ಲಿ ಮೂಡಿಸುವುದು ಮಾತ್ರ ಉಳಿಯುತ್ತದೆ. ಹೇಗಿದ್ದರೂ ಮನೆ ಹೆಸರನ್ನು ಮನೆಯ ಮೇಲೆ ಕೆತ್ತಿಸುವುದು ಅಪರೂಪವೆ. ಏನಿದ್ದರೂ ಪೌಳಿಗೋಡೆಯ ನಡುವೆ ಅಥವಾ ಒಂದಂಚಿನಲ್ಲಿ ಬರೆಸುವುದು ರೂಢಿ. ಸರಿಯಾಗಿ ಹೇಳಬೇಕೆಂದರೆ ಗೇಟಿನ ಅಕ್ಕಪಕ್ಕದ ಗೋಡೆಮೋಟುಗಳ ಮೇಲ್ಬದಿಯಲ್ಲಿ ಹೊಳೆಯುವ ಕಲ್ಲಿನ ಫಲಕದಲ್ಲಿ ಹೆಸರು ಕೆತ್ತಿಸುವುದು ಪ್ರಚಾರಕ್ಕೆ ಬಂದಿದೆ. ಒಟ್ಟಿನಲ್ಲಿ ಹೆಸರು ಎದ್ದು ಕಾಣುವಂತಿರಬೇಕು. ಮನೆ ನಂಬರು ಮನೆಯಾತನ ಹೆಸರೂ ಜೊತೆಗಿದ್ದರೆ ಒಳ್ಳೆಯದೇ. ಹೀಗಿದ್ದರೆ ಮನೆ ಹುಡುಕುವವರಿಗೆ ಅನುಕೂಲ. ಕೆಲವು ಸಲ ಮನೆಯಾತನ ಹೆಸರನ್ನು ಹೀಗೆ ಫಲಕದಿಂದ ತಿಳಿದುಕೊಂಡು, ಆತನಿಲ್ಲದ ಹೊತ್ತಿನಲ್ಲಿ ಆತ್ಮೀಯತೆ ನಟಿಸುತ್ತ ಮನೆಯವರಿಗೆ ಸಣ್ಣ ದೊಡ್ಡ ಟೋಪಿ ಹಾಕುವವರಿಗೂ ಕೊರತೆಯೇನಿಲ್ಲ. ಹೀಗೆ ಮೋಸ ಮಾಡುವವರು ಇರುತ್ತಾರೆಂದು ಹೆಸರು ಕೆತ್ತಿಸದೆ ಇರಲು ಯಾರಿಗೆ ಇಷ್ಟವಾಗುತ್ತದೆ?

ಕನ್ನಡದ ಕವಿ ರನ್ನನಿಗೆ ತನ್ನ ಹೆಸರು ಕೆತ್ತಿಕೊಳ್ಳಲು ಪುಟ್ಟ ಫಲಕ ಸಾಕೆನಿಸಲಿಲ್ಲ. ಶ್ರವಣ ಬೆಳಗೊಳದ ಚಿಕ್ಕಬೆಟ್ಟದ ವಿಸ್ತಾರ ಹಿನ್ನೆಲೆಯಲ್ಲಿ 'ಶ್ರೀಕವಿರತ್ನಂ' ಎಂದು ಕೊರೆಸಿಕೊಂಡುಬಿಟ್ಟ. ಅವನೇ ಬೆಟ್ಟ ಹತ್ತಿದ ಸಂಭ್ರಮದಲ್ಲಿ ಕೆತ್ತಿದ್ದರೂ ಇರಬಹುದು. ಎಷ್ಟಾದರೂ ಅವನು ಅಂದಿನ ಯುವಕವಿ. ತನ್ನ ಹೆಸರ ಅಗ್ಗಳಿಕೆಯನ್ನು ಹೇಳಿಕೊಳ್ಳುವ ಹುಮ್ಮಸ್ಸೂ ಇತ್ತು; ಪ್ರತಿಭೆಯೂ ಇತ್ತು. ಯಾರಿಗಾದರೂ ಅಷ್ಟೆ. ತನ್ನ ಹೆಸರು ತನಗೆ ಪ್ರಿಯವಾದದ್ದು.

ರನ್ನನ ಹೆಸರನ್ನು ಹೊತ್ತ ಆ ಬೆಟ್ಟದ ಬದಿ, ಇಂದಿಗೂ ಕನ್ನಡ ಸಾಹಿತ್ಯಪ್ರೇಮಿಗಳಿಗೆ ರೋಮಾಂಚನವುಂಟು ಮಾಡುತ್ತಿದೆ. ಅಲ್ಲಿ ನಿಂತರೆ ಚಿಕ್ಕಬೆಟ್ಟದ ಮೇಲಿನ ಹಲವಾರು ಜೈನಧಾರ್ಮಿಕ ಕಟ್ಟಡಗಳು ಕಾಣುತ್ತವೆ. ಎದುರಿನ ದೊಡ್ಡಬೆಟ್ಟದ ಮೇಲೆ ಎತ್ತರದ ಗೊಮ್ಮಟಮೂರ್ತಿ, ನಡುವೆ ವಿಸ್ತಾರವಾದ ಬಿಳಿಯ ಕೊಳ. ಅಂದಿನ ಜನ ಯಾವುದನ್ನೂ ಸಣ್ಣದಾಗಿ ಮಾಡುತ್ತಿರಲಿಲ್ಲ. ಬರೆದರೆ ದೀರ್ಘಕೃತಿಗಳನ್ನೇ ಬರೆದು 'ಮಹಾಕಾವ್ಯ' ಎಂದು ಕರೆದುಕೊಳ್ಳುತ್ತಿದ್ದರು. ಕೆತ್ತಿದರೆ ಗೊಮ್ಮಟನಂತಹ ದೊಡ್ಡ ವಿಗ್ರಹಗಳನ್ನೇ ಕೆತ್ತುತ್ತಿದ್ದರು. ಕಲ್ಲಿನಲ್ಲಿ ಕುಸುರಿ ಕೆಲಸದ ಕಲಾತ್ಮಕತೆಯನ್ನು ಮೂಡಿಸಲು ಹೊಯ್ಸಳ ಯುಗವು ಬರಬೇಕಾಯಿತು. ಅದು ಆಯಾ ಯುಗದ ಹೆಮ್ಮೆಯೂ ಹೌದು.

ರನ್ನನ ಹಿರಿಯ ಸಮಕಾಲೀನನಾದ ಪಂಪ ಯಾಕೆ ತನ್ನ ಹೆಸರನ್ನು ಬಂಡೆಯ ಮೇಲೆ ಕೆತ್ತಿಸಿಕೊಳ್ಳಲಿಲ್ಲ? ಆ ಬಗ್ಗೆ ಯಾವ ಸಂಶೋಧಕರಿಗೂ ಇನ್ನೂ ಯಾವ ಮಾಹಿತಿಯೂ ದೊರೆತಿಲ್ಲವೆಂದು ಕಾಣುತ್ತದೆ. ಪಂಪನಿಗೆ ತನ್ನ ಹೆಸರನ್ನು ಬಂಡೆಯ ಮೇಲೆ ಕೆತ್ತಿಸದಿದ್ದರೂ ಶತಮಾನಗಳ ಕಾಲ ಉಳಿಯುತ್ತದೆಂದು ತಿಳಿದಿದ್ದಿರಬಹುದು. ಅಥವಾ ಭರತ ಚಕ್ರವರ್ತಿಯು ದಿಗ್ವಿಜಯ ಶಾಸನವನ್ನು ಕೆತ್ತಿಸುವ ಪ್ರಸಂಗವನ್ನು

ಅದ್ಭುತವಾಗಿ ಆದಿಪುರಾಣದಲ್ಲಿ ನಿರೂಪಿಸಿದ ಮೇಲೆ ಬಂಡೆಯ ಮೇಲೆ ಹೆಸರು ಕೊರೆಸುವುದು ವ್ಯರ್ಥ ಎಂಬ ಭಾವನೆ ಅವನಲ್ಲಿ ಗಟ್ಟಿಗೊಂಡಿರಬಹುದು. ಆದಿತೀರ್ಥಂಕರನ ಮಗ ಭರತ ಚಕ್ರವರ್ತಿ ಷಟ್ಖಂಡಗಳನ್ನು ಗೆದ್ದು ತನ್ನ ಗೆಲುವಿನ ಶಾಸನವನ್ನು ವೃಷಭಾಚಲದಲ್ಲಿ ಬರೆಸಲು ಹೋಗುತ್ತಾನೆ. ಅಲ್ಲಿ ಹಿಂದಿನ ಅನೇಕ ಚಕ್ರವರ್ತಿಗಳು ಬರೆಸಿದ ಆತ್ಮ ಪ್ರಶಂಸೆಗಳು ತುಂಬಿಹೋಗಿದ್ದು ಭರತೇಶನಿಗೆ ತನ್ನ ಹೆಸರು ಬರೆಸಲು ಸೂಕ್ತವಾದ ಸ್ಥಳವೇ ದೊರಕುವುದಿಲ್ಲ–"ಅಂತವನೊಯ್ಯನೆ ನೋಡಿ ಸೋರ್ದುದು ಕೊಳಕೊಂಡ ಗರ್ವರಸಂ"

ಪಂಪ ಬಂಡೆಯ ಮೇಲೆ ಹೆಸರು ಕೆತ್ತಿಸಿಕೊಳ್ಳಲಿಲ್ಲ. ಅವನಿಗೆ ಅವನದೇ ಕಾರಣಗಳು ಇದ್ದಿರಬಹುದು. ರನ್ನನಿಗೂ ತನ್ನ ಹೆಸರು ಕೆತ್ತಿಸಿಕೊಳ್ಳಲು ಅವನದೇ ಆದ ಕಾರಣಗಳು ಇದ್ದಿರಬೇಕು. ಆ ಇಬ್ಬರು ಪ್ರಾಚೀನ ಕವಿಗಳ ವೈಯಕ್ತಿಕ ಅಭಿರುಚಿಗಳ ಬಗ್ಗೆ ನಿಶ್ಚಯವಾಗಿ ಏನನ್ನು ಹೇಳುವುದೂ ಸುಲಭವಲ್ಲ. ಹಿಂದೆ ಹೇಗಿತ್ತೋ ಮುಂದೆ ಏನಾಗುತ್ತದೋ ಸಂಪೂರ್ಣವಾಗಿ ಕಂಡವರಾರು? ಇತಿಹಾಸವೂ ಅರ್ಧಸತ್ಯವನ್ನು ಹೇಳುತ್ತದೆ. ಭವಿಷ್ಯವಂತೂ ಯಾರಿಗೂ ಗೊತ್ತಾಗುವುದಿಲ್ಲ. ವರ್ತಮಾನದಲ್ಲಿ ನಮಗೆ ನಮ್ಮ ನಾಮಫಲಕದ ಸಂಭ್ರಮ ಇರುವಷ್ಟು ದಿನ ನಮಗೆ ನಮ್ಮ ಹೆಸರಿನ ಪುಲಕ.

## ಅಭ್ಯಾಸ

**೧. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು–ಎರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ನಾಮಫಲಕ ಎಲ್ಲಿ ಇದೆ ?

೨. ಬಿಳಿಯ ಕೊಳ ಎಲ್ಲಿದೆ?

೩. ಭರತಚಕ್ರವರ್ತಿಯು ತನ್ನ ಗೆಲುವಿನ ಶಾಸನವನ್ನು ಎಲ್ಲಿ ಬರೆಸಲು ಹೋಗುತ್ತಾನೆ?

೪. ಪಂಪನು ತನ್ನ ಹೆಸರನ್ನು ಏಕೆ ಕೆತ್ತಿಸಲಿಲ್ಲ?

೫. ಭರತ ಚಕ್ರವರ್ತಿಗೆ ತನ್ನ ಹೆಸರನ್ನು ಬರೆಸಲು ಏಕೆ ಸಾಧ್ಯವಾಗಲಿಲ್ಲ?



* * * * *

## ಪೋಷಕ ಪಾಠ – ೦೩

# ಉದಾತ್ತ ಚಿಂತನೆಗಳು

**ಸಂಗ್ರಹ**

## ೧. ಅಂಬೇಡ್ಕರ್

ಸ್ವಾತಂತ್ರ್ಯ ಎಂದರೇನು? ಮುಕ್ತಸಮಾಜದ ವ್ಯವಸ್ಥೆಗೆ ಅದು ಏಕೆ ಅಗತ್ಯ?

ಸ್ವಾತಂತ್ರ್ಯ ಎರಡು ಬಗೆಯಾಗುತ್ತದೆ; ಪೌರ ಸ್ವಾತಂತ್ರ್ಯ ಹಾಗೂ ರಾಜಕೀಯ ಸ್ವಾತಂತ್ರ್ಯ. ಪೌರ ಸ್ವಾತಂತ್ರ್ಯ ಈ ಅಂಶಗಳನ್ನು ಹೊಂದಿರುತ್ತದೆ. (೧) ಚಲವಲನ ಸ್ವಾತಂತ್ರ್ಯ–ಸೂಕ್ತ ನ್ಯಾಯಾಂಗ ಕ್ರಮವಿಲ್ಲದೆ ವ್ಯಕ್ತಿಯನ್ನು ಬಂಧಿಸುವಂತಿಲ್ಲದ್ದು, (೨) ವಾಕ್ ಸ್ವಾತಂತ್ರ್ಯ (ಆಲೋಚನೆ, ಓದು, ಬರೆಹ, ಚರ್ಚೆ ಇವುಗಳ ಸ್ವಾತಂತ್ರ್ಯ ಇದರಲ್ಲೇ ಸೇರುತ್ತದೆ); ಮತ್ತು (೩) ಕ್ರಿಯಾ ಸ್ವಾತಂತ್ರ್ಯ.

ಮೊದಲನೆಯ ಬಗೆಯ ಸ್ವಾತಂತ್ರ್ಯ ಮೂಲಭೂತವಾದದ್ದು. ಮೂಲ ಸ್ವರೂಪ ಮಾತ್ರದ್ದಲ್ಲ. ಅದು ಅತ್ಯಂತ ಅಗತ್ಯವಾದದ್ದೂ ಹೌದು. ಅದರ ಮೌಲ್ಯದ ಬಗ್ಗೆ ಯಾವುದೇ ಸಂದೇಹಕ್ಕೆ ಎಡೆಯಿಲ್ಲ. ಎರಡನೆಯ ಬಗೆಯ ಸ್ವಾತಂತ್ರ್ಯವನ್ನು ಅಭಿಪ್ರಾಯ ಸ್ವಾತಂತ್ರ್ಯ ಎಂದೂ ಹೇಳಬಹುದು. ಅದು ಅನೇಕ ಕಾರಣಗಳಿಂದ ಮಹತ್ವದ್ದಾಗುತ್ತದೆ. ಬೌದ್ಧಿಕ, ನೈತಿಕ, ರಾಜಕೀಯ ಮತ್ತು ಸಾಮಾಜಿಕ ಪ್ರಗತಿಗೆ ಅದು ಅತ್ಯಗತ್ಯ ಪರಿಸ್ಥಿತಿ. ಅದು ಇಲ್ಲದ ಕಡೆ ಪರಿಸ್ಥಿತಿ ಏಕತಾನದ್ದಾಗಿ, ಎಲ್ಲ ಬಗೆಯ ಚಲನಶೀಲತೆ ಕುಂದುತ್ತದೆ.

ಕ್ರಿಯಾ ಸ್ವಾತಂತ್ರ್ಯವೆಂದರೆ, ತನಗೆ ಇಷ್ಟ ಬಂದ ಕೆಲಸ ಮಾಡಲು ವ್ಯಕ್ತಿಗೆ ಅವಕಾಶವಿರುವುದು. ಅದು ಔಪಚಾರಿಕವಾಗಿದ್ದರೆ ಸಾಲದು, ವಾಸ್ತವಿಕವಾಗಿ ಕೂಡ ಜಾರಿಯಲ್ಲಿರಬೇಕು. ಅದು ನಿರ್ದಿಷ್ಟ ಕಾರ್ಯಗಳನ್ನು ಮಾಡಲು ಇರುವ ಪರಿಣಾಮಕಾರಿಯಾದ ಸಾಮರ್ಥ್ಯವಾಗಬೇಕು. ಈ ಪ್ರಯೋಜನವನ್ನು ಪಡೆಯಲು ಸಾಧ್ಯವಿಲ್ಲದ ಕಡೆ ಸ್ವಾತಂತ್ರ್ಯವೂ ಇರುವುದಿಲ್ಲ. ಶೋಷಣೆ ಎಲ್ಲಿ ಇಲ್ಲವಾಗಿದೆಯೋ ಒಂದು ವರ್ಗವು ಇನ್ನೊಂದು ವರ್ಗವನ್ನು ತುಳಿಯುತ್ತಿಲ್ಲವೋ, ಎಲ್ಲಿ ನಿರುದ್ಯೋಗವಿಲ್ಲವೋ, ಬಡತನವಿಲ್ಲವೋ. ಎಲ್ಲಿ ತನ್ನ ಕೆಲಸದ ಫಲವಾಗಿ ತನ್ನ ಕೆಲಸ, ಮನೆ, ಆಹಾರಗಳನ್ನು ಕಳೆದುಕೊಂಡುಬಿಡುವ ಭೀತಿ ವ್ಯಕ್ತಿಗೆ ಇರುವುದಿಲ್ಲವೋ ಅಲ್ಲಿ ನಿಜವಾದ ಕ್ರಿಯಾ ಸ್ವಾತಂತ್ರ್ಯ ಇದೆ ಎಂದು ಹೇಳಬಹುದು.

ರಾಜಕೀಯ ಸ್ವಾತಂತ್ರ್ಯ ಇರುವುದು ವ್ಯಕ್ತಿಗೆ ಶಾಸನಗಳನ್ನು ರಚಿಸುವುದರಲ್ಲಿ, ಸರಕಾರಗಳ ಸ್ಥಾಪನೆ, ವಿಸರ್ಜನೆಗಳಲ್ಲಿ ಪಾಲು ಇರುವ ಹಕ್ಕಿನಲ್ಲಿ. ಸರಕಾರ ಇರುವುದಾದರೂ ಜನರಿಗೆ ಜೀವನ, ಸ್ವಾತಂತ್ರ್ಯ, ಸಂತೋಷಾನ್ವೇಷಣೆಗಳನ್ನು ಒದಗಿಸಿ ಕೊಡುವ ಸಲುವಾಗಿ. ಆದ್ದರಿಂದ ಸರಕಾರವು ಯಾರನ್ನು ರಕ್ಷಿಸುವುದು ತನ್ನ ಕರ್ತವ್ಯವಾಗಿದೆಯೋ, ಆ ಜನರಿಂದಲೇ ತನ್ನ ಅಧಿಕಾರವನ್ನೂ ಬಲವನ್ನೂ ಪಡೆದುಕೊಳ್ಳಬೇಕಾಗುತ್ತದೆ. ಆಳಲ್ಪಡುವವರ ಸಮ್ಮತಿಯಿಂದಲೇ ಸರಕಾರದ ಅಸ್ತಿತ್ವ, ಅಧಿಕಾರ ಮತ್ತು ಶಕ್ತಿ ಎಂದು ಹೇಳಿದಾಗ ಇರುವ ಅರ್ಥ ಇದೇ. ವಾಸ್ತವವಾಗಿ ರಾಜಕೀಯ ಸ್ವಾತಂತ್ರ್ಯ ಎನ್ನುವುದು ಮಾನವ ವ್ಯಕ್ತಿತ್ವ ಮತ್ತು ಸಮಾನತೆಗಳ ತತ್ವದಿಂದ ಅನುಗಮನ ಮಾಡಿದ ತತ್ವವೇ ಸರಿ. ಏಕೆಂದರೆ ರಾಜಕೀಯವಾದ ಸಮಸ್ತ ಅಧಿಕಾರವೂ ಜನತೆಯಿಂದ ಬರುತ್ತದೆ. ತಮ್ಮ ಸಾರ್ವಜನಿಕವಾದ ಹಾಗೂ ಖಾಸಗಿಯಾದ ಜೀವನವನ್ನು ನಿರ್ದೇಶಿಸುವ, ನಿಯಂತ್ರಿಸುವ ಸಾಮರ್ಥ್ಯವನ್ನು ಅವರು ತಾವೇ ಹೊಂದಿರುತ್ತಾರೆಯೇ ಹೊರತು ಬೇರೆ ಯಾರೂ ಅಲ್ಲ ಎಂದು ಇದರ ಅರ್ಥವಾಗುತ್ತದೆ.

ಮುಕ್ತಸಮಾಜವ್ಯವಸ್ಥೆಯ ಈ ಎರಡು ಮೂಲ ಸಿದ್ಧಾಂತಗಳೂ ಪರಸ್ಪರ ಸಂಬಂಧಿಸಿವೆ. ಅವುಗಳನ್ನು ಬೇರ್ಪಡಿಸುವುದು ಸಾಧ್ಯವಿಲ್ಲ. ಮೊದಲನೆಯ ಸಿದ್ಧಾಂತವನ್ನು ಒಪ್ಪಿಕೊಂಡೊಡನೆ ಎರಡನೆಯ ಸಿದ್ಧಾಂತವು

ತನಗೆ ತಾನೇ ಅನುಸರಿಸಿ ಬರುತ್ತದೆ. ಮಾನವ ವ್ಯಕ್ತಿತ್ವದ ಪಾವಿತ್ರ್ಯವನ್ನು ಒಪ್ಪಿಕೊಂಡರೆ, ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರತ್ವಗಳ ಅಗತ್ಯವನ್ನೂ, ವ್ಯಕ್ತಿತ್ವ ವಿಕಾಸಕ್ಕೆ ತಕ್ಕ ಪರಿಸ್ಥಿತಿ ಎಂದು ಒಪ್ಪಿಕೊಳ್ಳಲೇಬೇಕಾಗುತ್ತದೆ.

## ೨. ಗಾಂಧೀಜಿ

ಅಂದವಾದ ಅಕ್ಷರ, ಒಳ್ಳೆಯ ಬರವಣಿಗೆ, ಶಿಕ್ಷಣದ ಆವಶ್ಯಕ ಅಂಶವಲ್ಲವೆಂಬ ಭಾವನೆ ನನಗೆ ಹೇಗೆ ಬಂತೋ ಕಾಣೆ. ಇಂಗ್ಲೆಂಡ್‌ಗೆ ಹೋಗುವವರೆಗೆ ನನ್ನಲ್ಲಿ ಇದೇ ಭಾವನೆ ಇತ್ತು. ಅನಂತರ ದಕ್ಷಿಣ ಆಫ್ರಿಕಾಕ್ಕೆ ಹೋದ ಮೇಲೆ, ಅಲ್ಲಿ ಸುಶಿಕ್ಷಿತ ಯುವಕರ ಮತ್ತು ವಕೀಲರ ಮುತ್ತು ಪೋಣಿಸಿದಂತಿದ್ದ ಸುಂದರ ಬರವಣಿಗೆ ನೋಡಿ, ನನಗೆ ನಾಚಿಕೆಯೂ ಪಶ್ಚಾತ್ತಾಪವೂ ಉಂಟಾಯಿತು. ಕೆಟ್ಟ ಅಕ್ಷರದ ಬರವಣಿಗೆ ಅಪಕ್ವ ಮತ್ತು ಅಪೂರ್ಣ ಶಿಕ್ಷಣದ ಚಿಹ್ನೆ ಎಂದು ನಾನು–ಅರಿತೆನು. ಈಚೆಗೆ ನನ್ನ ಬರಹವನ್ನು ತಿದ್ದಿಕೊಳ್ಳಬೇಕೆಂದು ಪ್ರಯತ್ನಿಸಿದೆ. ಸುಟ್ಟಮಡಕೆಗೆ ಹಸಿಮಣ್ಣನ್ನು ಮೆತ್ತಲು ಸಾಧ್ಯವೆ? ಆ ವೇಳೆಗೆ ಕಾಲ ಮೀರಿ ಹೋಗಿತ್ತು. ಚಿಕ್ಕವಯಸ್ಸಿನಲ್ಲಿ ಅಸಡ್ಡೆ ಮಾಡಿದುದನ್ನು ತಿದ್ದಿಕೊಳ್ಳಲು ಆಗಲಿಲ್ಲ. ನನ್ನ ಉದಾಹರಣೆಯಿಂದ ಒಳ್ಳೆಯ ಬರವಣಿಗೆ ಉತ್ತಮ ಶಿಕ್ಷಣದ ಅವಶ್ಯವಾದ ಅಂಶವೆಂಬುದನ್ನು ಪ್ರತಿಯೊಬ್ಬ ಯುವಕನೂ, ಯುವತಿಯೂ ತಿಳಿದುಕೊಳ್ಳಲಿ.

ರಸ್ಕಿನ್‌ನ "ಅನ್‌ಟು ದಿಸ್ ಲಾಸ್ಟ್" ಎಂಬ ಪುಸ್ತಕವನ್ನು ಓದಲು ಪ್ರಾರಂಭಿಸಿದುದೇ ತಡ, ಅದನ್ನು ಕೆಳಗಿಳಿಸಲು ಸಾಧ್ಯವಾಗಲಿಲ್ಲ. ಅದು ನನ್ನ ಮನಸ್ಸನ್ನು ಸೆರೆಹಿಡಿಯಿತು. ಆ ಪುಸ್ತಕದಲ್ಲಿ ಹೇಳಿದ್ದ ಧ್ಯೇಯಗಳಿಗನುಸಾರವಾಗಿ ನನ್ನ ಜೀವನವನ್ನು ಬದಲಾಯಿಸಿಕೊಳ್ಳಬೇಕೆಂದು ನಾನು ನಿರ್ಣಯಿಸಿಕೊಂಡೆ. ನನ್ನ ವಿದ್ಯಾಭ್ಯಾಸದ ಕಾಲದಲ್ಲಿ ಪಠ್ಯಪುಸ್ತಕಗಳ ಹೊರತು ಮತ್ತೇನನ್ನೂ ಓದಲಿಲ್ಲವೆಂದು ಹೇಳಬಹುದು. ನಾನು ಜೀವನದ ಕರ್ಮರಂಗವನ್ನು ಪ್ರವೇಶಿಸಿದ ಮೇಲೆ, ಏನನ್ನೂ ಓದಲು ನನಗೆ ಸಮಯವೆ ದೊರೆಯಲಿಲ್ಲ. ಆದುದರಿಂದ ನನಗೆ ಹೆಚ್ಚಾದ ಪುಸ್ತಕ ಜ್ಞಾನವಿದೆಯೆಂದು ಹೇಳಲಾರೆ. ನನ್ನ ಮಿತವಾದ ವ್ಯಾಸಂಗ ನಾನು ಓದಿದುದನ್ನು ಚೆನ್ನಾಗಿ ಅರಗಿಸಿಕೊಳ್ಳಲು ಸಾರಥ್ಯಮಾಡಿದೆ. ಇವುಗಳ ಪೈಕಿ, ಬಾಳಿನಲ್ಲಿ ತತ್‌ಕ್ಷಣ ಪರಿಣಾಮಕಾರಿಯಾದ ಬದಲಾವಣೆಯನ್ನು ಮಾಡಿದುದು 'ಅನ್‌ಟು ದಿಸ್ ಲಾಸ್ಟ್' ಎಂಬ ಪುಸ್ತಕ. ಅನಂತರ ನಾನು ಆ ಪುಸ್ತಕವನ್ನು ಸರ್ವೋದಯವೆಂಬ ಹೆಸರಿನಿಂದ ಗುಜರಾತಿ (ಭಾಷೆ)ಗೆ ಅನುವಾದ ಮಾಡಿದೆ.

"ಅನ್‌ಟು ದಿಸ್ ಲಾಸ್ಟ್" ಗ್ರಂಥದ ಸಿದ್ಧಾಂತಗಳನ್ನು ನಾನು ಹೀಗೆ ತಿಳಿದೆ.

೧. ಎಲ್ಲರ ಒಳ್ಳೆಯದರಲ್ಲಿಯೇ ನಮ್ಮ ಒಳ್ಳೆಯದು ಅಡಗಿದೆ.

೨. ವಕೀಲನ ಕೆಲಸಕ್ಕೆ ಇರುವ ಬೆಲೆಯೇ ಕ್ಷೌರಿಕನ ಕೆಲಸಕ್ಕೂ ಇದೆ. ತಮ್ಮ ಕೆಲಸದಿಂದ ಜೀವನ ನಿರ್ವಹಿಸಲು ಎಲ್ಲರಿಗೂ ಸಮಾನವಾದ ಹಕ್ಕಿದೆ.

೩. ಶ್ರಮ ಜೀವಿಯ ಜೀವನ, ಉಳುವವನ ಅಥವ ಕೈಕಸುಬುಗಾರನ ಜೀವನವೇ ಯೋಗ್ಯ ಜೀವನ.



## ೩. ಸ್ವಾಮಿ ವಿವೇಕಾನಂದ

ದೇಶದ ಭಾಷೆಯಲ್ಲಿ ಜನರಿಗೆ ಭಾವನೆಗಳನ್ನು ನೀಡಿ. ಅವರು ವಿಷಯಗ್ರಹಣ ಮಾಡಿಕೊಳ್ಳುವರು. ಆದರೆ ಅವರಿಗೆ ಮತ್ತೊಂದು ಆವಶ್ಯಕತೆ ಇದೆ. ಅದು ಸಂಸ್ಕೃತಿ. ನೀವು ಅವರಿಗೆ ಇದನ್ನು ಕೊಡುವ ತನಕ ಅವರ ಪ್ರಗತಿ ಸ್ಥಿರವಾಗಲಾರದು. ಸಂಸ್ಕೃತಿ ಮಾತ್ರ ಆಘಾತವನ್ನು ಸಹಿಸಬಲ್ಲದು. ಕೇವಲ ಜ್ಞಾನರಾಶಿಗೆ ಅದನ್ನು ಎದುರಿಸುವ ಶಕ್ತಿ ಇಲ್ಲ. ಜಗತ್ತಿಗೆ ಜ್ಞಾನರಾಶಿಯನ್ನೇ ಕೊಡಬಹುದು. ಆದರೆ ಅದರಿಂದ ಹೆಚ್ಚು ಪ್ರಯೋಜನವಿಲ್ಲ. ಸಂಸ್ಕೃತಿಯು ರಕ್ತದಲ್ಲಿ ಹರಿಯಬೇಕು. ಆಧುನಿಕ ಕಾಲದಲ್ಲಿ ಬೇಕಾದಷ್ಟು ಜ್ಞಾನಸಂಪತ್ತನ್ನು ಪಡೆದ ದೇಶಗಳನ್ನು ನೋಡಿರುವೆವು. ಆದರೆ ಅದರಿಂದ ಏನು ಪ್ರಯೋಜನ? ಅವರು ಕಾಡುಜನರಂತೆ ಇರುವರು. ಅವರಲ್ಲಿ ಸಂಸ್ಕೃತಿ ಇಲ್ಲ.

ನಮ್ಮ ಶಾಸ್ತ್ರಗಳಲ್ಲಿ ಹುದುಗಿರುವ, ಮಠ ಮತ್ತು ಅರಣ್ಯಗಳಲ್ಲಿ ಅಡಗಿರುವ ಕೆಲವೇ ವ್ಯಕ್ತಿಗಳ ಸ್ವತ್ತಾಗಿರುವ ಆಧ್ಯಾತ್ಮಿಕರತ್ನಗಳನ್ನು ದೇಶ ಭಾಷೆಗಳ ಮೂಲಕ ಜನರಿಗೆ ಪ್ರಚಾರ ಮಾಡಬೇಕು.

ವೇದವೇದಾಂತಗಳ ಮುಖ್ಯ ಪಲ್ಲವಿಯೇ ಶ್ರದ್ಧೆ. ಯಾವ ಶ್ರದ್ಧೆಯ ಮೂಲಕ ನಚಿಕೇತನು ಯಮರಾಜನನ್ನು ಕೂಡ ಸಂದರ್ಶಿಸಿ ಪ್ರಶ್ನೆ ಮಾಡುವುದಕ್ಕೆ ಧೈರ್ಯ ಹೊಂದಿದನೋ, ಯಾವ ಶ್ರದ್ಧೆಯ ಮೂಲಕ ಪ್ರಪಂಚ ಚಲಿಸುತ್ತಿರುವುದೋ– ಅಂತಹ ಶ್ರದ್ಧೆಯು ನಾಶವಾಗುತ್ತಿದೆ. ಇದರ ಪರಿಹಾರಕ್ಕಾಗಿ ಮೊದಲು ಆತ್ಮಜ್ಞಾನ ಪ್ರಚಾರವಾಗಬೇಕು.

ಯಾರೂ ದುರ್ಬಲರಲ್ಲ. ಆತ್ಮ ಸರ್ವಶಕ್ತ, ಸರ್ವಜ್ಞ, ಏಳಿ, ಯಾರಿಗೂ ಮಣಿಯಬೇಡಿ. ನಿಮ್ಮಲ್ಲಿರುವ ಭಗವಂತನನ್ನು ವ್ಯಕ್ತಗೊಳಿಸಿ. ಅದನ್ನು ಅಲ್ಲಗಳೆಯಬೇಡಿ. ಏಳಿ, ದುರ್ಬಲತೆಯ ಪರವಶತೆಯಿಂದ ಪಾರಾಗಿ. ಪಾರಾಗುವುದಕ್ಕೆ ಮಾರ್ಗ ನಿಮ್ಮ ಶಾಸ್ತ್ರಗಳಲ್ಲಿಯೇ ಇದೆ. ನಿಜವಾದ ಆತ್ಮನ ವಿಷಯವನ್ನು ನೀವು ಕೇಳಿ, ಇತರರಿಗೆ ಬೋಧಿಸಿ, ನಿದ್ರಿಸುವವರನ್ನು ಎಬ್ಬಿಸಿ. ಅವರು ಹೇಗೆ ಜಾಗೃತರಾಗುತ್ತಾರೆ ಎಂಬುದನ್ನು ನೋಡಿ. ಆಗ ಶಕ್ತಿ ಬರುವುದು. ಮಹಿಮೆ ಬರುವುದು, ಶ್ರೇಯಸ್ಸು ಬರುವುದು, ಪಾವಿತ್ರ್ಯ ಬರುವುದು. ಈಗ ನಿದ್ರಿಸುತ್ತಿರುವ ಜೀವ ಜಾಗೃತವಾಗಿ ಕಾರ್ಯೋನ್ಮುಖನಾಗುವಾಗ ಅವನಲ್ಲಿ ಎಲ್ಲ ಕಲ್ಯಾಣ ಗುಣಗಳೂ ಬರುವುವು.

ನಿಮ್ಮ ದೇಶದ ಮತ್ತು ಇಡಿಯ ಜಗತ್ತಿನ ಕಲ್ಯಾಣ ನಿಮ್ಮ ಮೇಲೆ ನಿಂತಿದೆ ಎಂದು ಭಾವಿಸಿ ಕಾರ್ಯೋನ್ಮುಖರಾಗಿ, ವೇದಾಂತದ ಸಂದೇಶವನ್ನು ಪ್ರತಿ ಮನೆಗೂ ಸಾರಿ, ಪ್ರತಿಯೊಂದು ಆತ್ಮದಲ್ಲಿರುವ ಸುಪ್ತ ಪಾವಿತ್ರ್ಯವನ್ನು ಜಾಗೃತಗೊಳಿಸಿ. ಅನಂತರ ನೀವು ಎಷ್ಟೇ ಅಲ್ಪವನ್ನು ಸಾಧಿಸಿದ್ದರೂ ನೀವು ಒಂದು ಮಹಾ ಆದರ್ಶಕ್ಕಾಗಿ ಬಾಳಿ ದುಡಿದು ಮಡಿದಿರಿ ಎಂಬ ತೃಪ್ತಿಯಾದರೂ ಇರುತ್ತದೆ.

ಈ ಆತ್ಮದ ಅನಂತ ಶಕ್ತಿಯನ್ನು ಭೌತಿಕ ಪ್ರಪಂಚದ ಮೇಲೆ ಬೀರಿದರೆ ಹಲವು ಭೌತಿಕ ಬೆಳವಣಿಗೆಗಳಾಗುವುವು. ಆಲೋಚನಾ ಪ್ರಪಂಚದ ಮೇಲೆ ಬೀರಿದರೆ ಬುದ್ಧಿ ತನ್ನ ಪರಾಕಾಷ್ಠೆಯನ್ನು ಮುಟ್ಟುವುದು, ತನ್ನ ಮೇಲೆಯೇ ಅದನ್ನು ಬೀರಿಕೊಂಡರೆ ಮಾನವನನ್ನು ದೇವನನ್ನಾಗಿ ಮಾಡುವುದು. ಮೊದಲು ನಾವು ದೇವರಾಗೋಣ. ಅನಂತರ ಇತರರು ದೇವರಾಗಲು ಅವರಿಗೆ ಸಹಾಯ ಮಾಡೋಣ. ಆದ್ದರಿಂದ ಆರ್ಯಮಾತೆಯ ಪುತ್ರರಿರಾ ಎಚ್ಚರಗೊಳ್ಳಿ, ಎದ್ದೇಳಿ; ಸೋಮಾರಿಗಳಾಗಬೇಡಿ; ಗುರಿಯು ದೊರಕುವವರೆಗೂ ನಿಲ್ಲಬೇಡಿ.



## ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಒಂದು–ಎರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ಕ್ರಿಯಾ ಸ್ವಾತಂತ್ರ್ಯ ಎಂದರೇನು?

೨. ರಾಜಕೀಯ ಸ್ವಾತಂತ್ರ್ಯದ ಮಹತ್ವವೇನು?

೩. ಅಂದವಾದ ಬರೆವಣಿಗೆಯ ಬಗ್ಗೆ ಗಾಂಧೀಜಿಯವರ ಅಭಿಪ್ರಾಯವೇನು?

೪. 'ಅನ್‌ಟು ದಿಸ್ ಲಾಸ್ಟ್' ಕೃತಿ ಗಾಂಧೀಜಿಯವರ ಮೇಲೆ ಯಾವ ಪರಿಣಾಮ ಬೀರಿತು?

೫. ವಿವೇಕಾನಂದರ ದೃಷ್ಟಿಯಲ್ಲಿ ದೇಶದ ಪ್ರಗತಿ ಸ್ಥಿರವಾಗುವುದು ಯಾವಾಗ?

೬. ಬಾಳಿನಲ್ಲಿ ತೃಪ್ತಿ ದೊರಕಬೇಕಾದರೆ ಏನು ಮಾಡಬೇಕೆಂಬುದು ವಿವೇಕಾನಂದರ ಅಭಿಪ್ರಾಯ?

## ಪೋಷಕ ಪಾಠ – ೦೪

# ಪಾರಿವಾಳ

– ಸು. ರಂ. ಎಕ್ಕುಂಡಿ

ದಟ್ಟ ಕಾಡಿನಲೊಂದು ಹೆಮ್ಮರದ ಹೊದರಿನಲಿ
ಇರುತಿತ್ತು ಪುಟ್ಟ ಸಂಸಾರ ಹೂಡಿ
ಮುದ್ದು ಬಿಳಿ ಪಾರಿವಾಳಗಳ ಜೋಡಿ ॥೧॥

ಹಗಲಿರುಳು ಜೊತೆಗೂಡಿ ಬಾಳಿದವು ಈ ಜೋಡಿ
ಎಂದಿಗೂ ಅಗಲಿರವು ಒಂದನೊಂದು
ಹಿಗ್ಗು ತುಂಬಿತು ಹೊದರಿನಲ್ಲಿ ಬಂದು ॥೨॥

ಇಟ್ಟ ಮೊಟ್ಟೆಯನೊಡೆದು ಹಿಗ್ಗಿತಿವುಗಳ ಪ್ರೀತಿ
ಮುದ್ದು ಮರಿಗಳ ಮಧುರ ಸದ್ದು ಕೇಳಿ
ದಿನಕಳೆದವಾನಂದದಿಂದ ಬಾಳಿ ॥೩॥

ಬೇಡವೊಬ್ಬನು ಬಂದು ಬಲೆಯ ಹರಡಿದನೊಮ್ಮೆ
ಪುಟ್ಟ ಮರಿಗಳು ಹಾರಿ ಸಿಲುಕಿ ಸೆರೆಗೆ
ಚೀತ್ಕರಿಸತೊಡಗಿದವು ಬರಲು ಹೊರಗೆ ॥೪॥

ಕಂಡು ಪಾರಿವಾಳಗಳ ಪಾಡು ತಾಯಿ ಧುಮುಕಿತು ಬಲೆಗೆ
ಹೆಂಡತಿಯನಗಲಿರದ ಗಂಡು ಹಕ್ಕಿ
ಒಳಗೆ ಬಂದಿತು ಬಳಿಗೆ ಬಿಕ್ಕಿ ಬಿಕ್ಕಿ ॥೫॥

ಕುರುಡು ವಾತ್ಸಲ್ಯದಲಿ ಕಳೆದುಕೊಂಡು ವಿವೇಕ
ಬಲೆಗೆ ನುಗ್ಗಿದ ಪಾರಿವಾಳ ಹಿಂಡು
ಹಸಿದ ಬೇಡನು ನಡೆದ ಹೊತ್ತುಕೊಂಡು ॥೬॥

ಮೋಹ ಮುಸುಕಿದ ಬುದ್ಧಿ ಸರ್ವನಾಶದ ಸಿದ್ಧಿ
ವ್ಯಾಮೋಹವನು ತೊರೆದು ಬಾಳಬೇಕು
ಏನು ಬಂದರು ಕೂಡ ತಾಳಬೇಕು ॥೭॥



### ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಒಂದು–ಎರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ಮುದ್ದು ಪಾರಿವಾಳಗಳ ಜೋಡಿ ಎಲ್ಲಿ ಸಂಸಾರ ಹೂಡಿತ್ತು?
೨. ಜೋಡಿಪಾರಿವಾಳಗಳು ಹೇಗೆ ಬಾಳುತ್ತಿದ್ದವು?
೩. ಪಾರಿವಾಳಗಳ ಆನಂದಕ್ಕೆ ಕಾರಣವೇನು?
೪. 'ಮೋಹ ಮುಸುಕಿದ ಬುದ್ಧಿ ಸರ್ವನಾಶದ ಸಿದ್ಧಿ'– ಈ ಮಾತಿನ ಸ್ವಾರಸ್ಯವನ್ನು ವಿವರಿಸಿರಿ.
೫. ಜೋಡಿ ಪಾರಿವಾಳಗಳ ದುಡುಕಿನ ನಿರ್ಧಾರದ ಬಗ್ಗೆ ನಿಮ್ಮ ಅಭಿಪ್ರಾಯವೇನು?

# ಜನಪದ ಒಗಟುಗಳು

**ಸಂಗ್ರಹ**

ಜನಪದ ಬೆಡಗಿನ ಒಗಟುಗಳಲ್ಲಿ ಪ್ರಶ್ನೆಗೆ ಉತ್ತರಿಸುವ ಮತ್ತು ಪದ್ಯದಲ್ಲಿಯೇ ಎದುರಾಳಿಗೆ ಮತ್ತೊಂದು ಒಗಟನ್ನು ಒಡ್ಡುವ ಕ್ರಮ ವೈಶಿಷ್ಟ್ಯಪೂರ್ಣವಾದದ್ದು. ಕೊಟ್ಟಿರುವ ಉದಾಹರಣೆಗಳಿಂದ ಇದನ್ನು ಆಸ್ವಾದಿಸಬಹುದು.

**ಒಗಟು ೧ :** "ಕೈಯುಂಟು ಕಾಲಿಲ್ಲ ಶಿರಹರಿದ ಮುಂಡ
ಮೈಯೊಳಗೆ ನವಗಾಯ ಒಂಬತ್ತು ತುಂಡ
ಒಯ್ಯನೊಯ್ಯನೇ ಬಂದು ಹೆಗಲೇರಿಕೊಂಡ
ರಾಯ ರಾಯರಿಗೆಲ್ಲ ತಾನೇ ಪ್ರಚಂಡ"

ಉತ್ತರ: "ನೀನು ಹೇಳಿದ ಬೆಡಗು 'ಅಂಗಿ' ಕಾಣಣ್ಣಾ
ನಾನೊಂದ ಬೆಡಗ ಹೇಳುವೆನು ಕೇಳಣ್ಣಾ"

**ಒಗಟು ೨ :** "ಅಂಗೈಯ ಕೊಟ್ಟರೆ ಮುಂಗೈಯ ನುಂಗುವುದು
ಸಿಂಗಳುಕನಲ್ಲ ಶಿವಬಲ್ಲ । ಬೆಡಿಗೀನ
ಜಾಣೆ ಕನ್ನಡವಾ ತಿಳಿದ್ಹೇಳೆ"

ಉತ್ತರ: "ಕನ್ನಡವ ಹೇಳಲಿಕೆ ಇನ್ನಾವ ಸೋಜಿಗವು
ಪನ್ನಂಧರನಾ ಶಿವಬಲ್ಲ। ನ್ಯಾರೋರ
ಕುಪ್ಪಸಲ್ಲವೇನೇ ಹಸೆಯವಳೆ"



**ಒಗಟು ೩ :** "ನೀರಲ್ಲೆ ಹುಟ್ಟೋದು ನೀರಲ್ಲೆ ಬೆಳಿಯೋದು
ನೀರು ತಾಕಿದರೆ ಮಟಮಾಯ। ಕನ್ನಡದ
ಬೆಡಗೀನ ಜಾಣೆ ತಿಳಿದ್ಹೇಳೆ"

ಉತ್ತರ: "ಕನ್ನಡವ ಹೇಳಲಿಕೆ ಇನ್ನಾವ ಸೋಜಿಗವು
ಪನ್ನಂಧರನಾ ಶಿವಬಲ್ಲ । ತಿನ್ನುವ
ಉಪ್ಪಲ್ಲವೇನು ಅರಸರೆ"

**ಒಗಟು ೪ :** "ಹಿತ್ತಲ್ಲಿ ಹುಟ್ಟೋದು ಹೊತ್ತು ನೀರ ಹುಯ್ಯೋದು
ಅದು ಒಂದು ಗಿಡದ ಪರಿಕಾರ– ಎಲೆಬಾಲೆ
ಬಾಲೆ ನಮ್ಮರ್ಥ ಒಡೆದ್ಹೇಳೆ"

ಉತ್ತರ :	"ನಿಮ್ಮ ಅರ್ಥವು ನಮ್ಮಿಗೆ ತಿಳಿಯಾವು
ನೀವಾಡಿದ ಮಾತು ಹುಸಿಯಲ್ಲ- ಮಾಶಿವನೆ
ಹಿತ್ಲವರೆ ಹೂವ ಅರಸ್ಯೋರು"

**ಒಗಟು ೫ :**	"ಕೆಸರಲ್ಲಿ ಹುಟ್ಟೋದು ಕೆಸರಲ್ಲಿ ಬೆಳೆಯೋದು
ಅದು ಒಂದು ಗಿಡದ ಪರಿಕಾರ-ಎಲೆಬಾಲೆ
ಬಾಲೆ ನಮ್ಮರ್ಥ ಒಡೆದ್ಹೇಳೆ."

ಉತ್ತರ:	"ನಿಮ್ಮ ಅರ್ಥವು ನಮ್ಮಿಗೆ ತಿಳಿಯಾವು
ನೀವಾಡಿದ ಮಾತು ಹುಸಿಯಲ್ಲ- ಮಾಶಿವನೆ
ತಾವರೆ ಬೇರ ಅರಸೋರು"

**ಒಗಟು ೬ :**	"ಬದಿನಲ್ಲಿ ಹುಟ್ಟೋದು ಬದಿನಲ್ಲಿ ಬೆಳೆಯೋದು
ಹೋಗೋರ ಮುಂಜೆರಗ ಹಿಡಿಯೋದು-ಎಲೆಬಾಲೆ
ಬಾಲೆ ಇದರರ್ಥ ಒಡೆದ್ಹೇಳೆ"

ಉತ್ತರ:	"ನಿಮ್ಮ ಅರ್ಥವು ನಮ್ಮಿಗೆ ತಿಳಿಯಾವು
ನೀವಾಡಿದ ಮಾತು ಹುಸಿಯಲ್ಲ- ಮಾಶಿವನೆ
ಉತ್ತರಾಣಿ ಗಿಡ ಅರಸೋರು"

**ಒಗಟು ೭ :**	"ಹೊಲದಲ್ಲಿ ಹುಟ್ಟೋದು ಹೊಲದಲ್ಲಿ ಬೆಳೆಯೋದು
ಉಳುವಾನ ಕಂಡು ನಗುವುದು- ಎಲೆಬಾಲೆ
ಬಾಲೆ ನಮ್ಮರ್ಥ ಒಡೆದ್ಹೇಳೆ"

ಉತ್ತರ:	"ನಿಮ್ಮ ಅರ್ಥವು ನಮ್ಮಿಗೆ ತಿಳಿಯಾವು
ನೀವಾಡಿದ ಮಾತು ಹುಸಿಯಲ್ಲ-ಮಾಶಿವನೆ
ಗರಕೆಯ ಹುಲ್ಲ ಅರಸೋರು"

**ಒಗಟು ೮ :**	"ಕಲ್ಲಲ್ ಕುಕ್ಕೂದಲ್ಲ ನೀರಲ್ ಸೆಳೆವುದಲ್ಲ
ಎಲ್ಲೆಲ್ಲೂ ಕಂಡ್ರೂ ಮಡಿವಸ್ತ್ರ – ಅಂಬಲ್‌ಹಾಡು
ಜಾಣೆ ಕನ್ನಡವ ತಿಳಿದ್ಹೇಳು"

ಉತ್ತರ:	"ಕನ್ನಡದ ಹಾಡನ್ನು ಹನ್ನೆಯ್ಡು ನಾಬಲ್ಲಿ
ಕನ್ನಡದ ಶಿವನ ಪದನವು – ಅಂಬಲ್‌ಹಾಡು
ಕೊಕ್ಕುಕ್ಕಿ ಮೇಲೆ ಅರ್ತುಂಟಾ?"

**ಒಗಟು ೯ :**	"ತಂದಿ ಮದಿಗ್ಹೋಪ್ದಲ್ಲ ತಾಯ್ಮನಿಗೆ ಹೋಪ್ದಲ್ಲ
ಮುಂದದು ಧಾರಿ ಮೂರುತಕ – ಅಂಬಲ್‌ಹಾಡು
ಜಾಣೆ ಕನ್ನಡವ ತಿಳಿದ್ಹೇಳು"

ಉತ್ತರ: “ಕನ್ನಡದ ಹಾಡನ್ನು ಹನ್ನೆಯ್ಡ ನಾಬಲ್ಲಿ
ಕನ್ನಡದ ಶಿವನ ಪದನವು – ಅಂಬಲ್‌ಹಾಡು
ಸಂಪ್ಗಿ ಹೂಗಿನ ಮುಂದೆ ಅರ್ತುಂಟಾ?”

**ಒಗಟು ೧೦ :** “ದರಿಯ ಮ್ಯಾಲ್ ಹುಟ್ಟುವುದು ದೊರಿಯಾಗಿ ಬೆಳೆವುದು
ಅರಮನೆಗುತ್ತರವ ಕೊಡುವುದು – ಅಂಬಲ್‌ಹಾಡು
ಜಾಣಿ ಕನ್ನಡವ ತಿಳಿದ್ಹೇಳು”

ಉತ್ತರ: “ಕನ್ನಡದ ಹಾಡನ್ನು ಹನ್ನೆಯ್ಡ ನಾಬಲ್ಲಿ
ಕನ್ನಡದ ಶಿವನ ಪದನವು – ಅಂಬಲ್‌ಹಾಡು
ಹನಿಮರನಲ್ದೆ ಅರ್ತುಂಟಾ?”

**ಒಗಟು ೧೧ :** “ಹಸಿಹಸಿಯ ಬೀಳೆ ಮಸಿಯ ಬಣ್ಣದ ಬೀಳೆ
ಬಿಸಿನೀರ ಹಾಕಿ ಸಲಗುವಿ – ಅಂಬಲ್‌ಹಾಡು
ಜಾಣಿ ಕನ್ನಡವ ತಿಳಿದ್ಹೇಳು”

ಉತ್ತರ: “ಕನ್ನಡದ ಹಾಡನ್ನು ಹನ್ನೆಯ್ಡ ನಾಬಲ್ಲಿ
ಕನ್ನಡದ ಶಿವನ ಪದನವು – ಅಂಬಲ್‌ಹಾಡು
ತಲೆಕುರ್ಲಲ್ದೆ ಅರ್ತುಂಟಾ?”

**ಒಗಟು ೧೨ :** “ಬಗಲಲ್ಲಿ ಕುಕ್ಕುವುದು ಬಾಯಲ್ಲಿ ತಿಂಬೂದು
ನಂಗ್ಹೇಳಿ ಅರ್ತು ಈ ಹಾಡಿನ – ಹೇಳ್ದಿರೆ
ಕೈಗೆ ಹಲ್‌ಮುರ್ದು ಕೊಡುವೆನು”

ಉತ್ತರ: “ಕನ್ನಡದ ಹಾಡನ್ನು ಹನ್ನೆಯ್ಡ ನಾಬಲ್ಲಿ
ಕನ್ನಡದ ಶಿವನ ಪದನವು – ಅಂಬಲ್‌ಹಾಡು
ಬೀಸುಕಲ್ಲಲ್ದೆ ಅರ್ತುಂಟಾ?”



## ಪದ–ಅರ್ಥ

ನ್ಯಾರೋರ–ನಾರಿಯರ, ಮಡಿವಸ್ತು–ಬಿಳಿಬಟ್ಟೆ, ಕೊಕ್ನಕ್ಕಿ–ಕೊಕ್ಕರೆ, ಮೂರುತಕ–ಮುಹೂರ್ತಕ್ಕೆ, ಹನಿಮರ–ತಾಳೆಮರ, ತಲೆಕುರ್ಲು–ತಲೆಕೂದಲು.

## ಅಭ್ಯಾಸ

**ಕೊಟ್ಟಿರುವ ಪ್ರಶ್ನೆಗಳಿಗೆ ಒಂದು–ಎರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ಒಂದನೆಯ ಒಗಟಿನ ಉತ್ತರ ‘ಅಂಗಿ’ ಎಂಬುದನ್ನು ಸಮರ್ಥಿಸಿರಿ.

೨. ಎರಡನೆಯ ಒಗಟಿಗೆ ‘ಕುಪ್ಪಸ’ವು ಉತ್ತರ ಎಂಬುದನ್ನು ಹೇಗೆ ಹೇಳುವಿರಿ?

೩. ಐದನೆಯ ಒಗಟಿಗೆ ‘ತಾವರೆ ಬೇರು’ ಎಂಬುದು ಉತ್ತರ –ಹೇಗೆ?

೪. ಎಂಟನೆಯ ಒಗಟಿನ ಉತ್ತರ ‘ಕೊಕ್ಕರೆ’ ಎಂಬುದನ್ನು ಸಮರ್ಥಿಸಿ

೫. ಒಗಟುಗಳಿಂದ ಶೈಕ್ಷಣಿಕವಾಗಿ ಏನು ಲಾಭ?

*****

## ಪಠ್ಯಾಧಾರಿತ ಪದಕೋಶ

**ಸಂಕೇತಾಕ್ಷರಗಳ ವಿವರ:–** [ಅ] ಅವ್ಯಯ; [ಕ್ರಿ] ಕ್ರಿಯಾಪದ; [ಗು] ಗುಣವಾಚಕ; [ನಾ] ನಾಮಪದ; [ವಿ] ವಿಶೇಷಣ; [ಧಾ] ದಾತು; [ಇಂ] ಇಂಗ್ಲಿಷ್; [ಗ್ರೀ] ಗ್ರೀಕ್; [ದೇ] ದೇಶ್ಯ; [ಸಂ] ಸಂಸ್ಕೃತ

### ಅ

**ಅಂಜನ**[ನಾ] ಕಾಡಿಗೆ. ನಿಧಿ, ನಿಕ್ಷೇಪ ಮೊದಲಾದುವುಗಳನ್ನು ಕಂಡುಹಿಡಿಯಲು ಕಣ್ಣಿಗೆ ಹಚ್ಚಿಕೊಳ್ಳುವ ಕಪ್ಪು.

**ಅಂದಣ**[ನಾ] ಮೇನೆ,ಪಲ್ಲಕ್ಕಿ. ಕಣ್ಣಿನ ಪೊರೆ.

**ಅಗಡು**[ನಾ]ತುಂಟತನ.[ಗು] ಹಿಡಿತಕ್ಕೆ ಸಿಗದ.

**ಅಗಸಿ**[ಅಗಸೆ][ನಾ] ಊರು,ಕೋಟೆ ಮುಂತಾದುವುಗಳ ಹೆಬ್ಬಾಗಿಲು. ಒಂದು ಬಗೆಯ ಮರ. ಒಂದು ಬಗೆಯ ಧಾನ್ಯ.

**ಅಗ್ಗಳಿಕೆ** [ದೇ][ನಾ] ದೊಡ್ಡಸ್ತಿಕೆ, ಶ್ರೇಷ್ಠತೆ. ಸಾಮರ್ಥ್ಯ

**ಅಡಿ**[ನಾ] ಹೆಜ್ಜೆ. ಪಾದ. ೧೨ಅಂಗುಲದ ಉದ್ದಳತೆ. ಕೆಳಭಾಗ.

**ಅಣಿ**[ಕ್ರಿ] ಸಿದ್ಧವಾಗು. ರಚಿಸು.[ನಾ] ಅಚ್ಚುಕಟ್ಟು. ಸಿದ್ಧತೆ,ಸಜ್ಜು. ಅವಕಾಶ. ನೆಯ್ಗೆ ಮಗ್ಗದ ಹಾಸುಹೊಕ್ಕುಗಳ ಜೋಡಣೆ.

**ಅತಿ** [ನಾ] ಹೆಚ್ಚು. [ಗು] ಮಿತಿಮೀರಿದ.

**ಅಧ್ವರ** [ಸಂ][ನಾ] ಯಜ್ಞ, ಯಾಗ

**ಅನುಬಲ**[ನಾ]. ಸಹಾಯಕ ಸೈನ್ಯ. ಒತ್ತಾಸೆ, ಬೆಂಬಲ.

**ಅನೃತ**[ನಾ] ಸತ್ಯವಲ್ಲದುದು, ಸುಳ್ಳು.

**ಅನ್ನೆಗಂ**[ಅ] ಆವರೆಗೆ. ಅಷ್ಟುಮಟ್ಟಿಗೆ. ಅಷ್ಟರಲ್ಲಿ. ಅದಕ್ಕೆ ಮುಂಚೆ.

**ಅನ್ವಯ**[ನಾ] ವಂಶ,ಕುಲ. ಸಂಬಂಧ. ಅನುಯಾಯಿ. ತಾತ್ಪರ್ಯ.

**ಅಬ್ಜ**[ನಾ] ನೀರಿನಲ್ಲಿ ಹುಟ್ಟಿದುದು,ತಾವರೆ. ಶಂಖ. ಚಂದ್ರ. ರತ್ನ,ಮುತ್ತು. ಐರಾವತ. ಧನ್ವಂತರಿ.

**ಅಬ್ಬೆ**[ನಾ] ತಾಯಿ. ಸದರ,ಹಗುರ. ಒಂದು ಜಾತಿಯ ಹುಳು. ಒಂದು ಬಗೆಯ ಸಸ್ಯ.

**ಅಬ್ಧಿ**[ನಾ] ಸಮುದ್ರ,ಕೊಳ.

**ಅಯ್ಯ**[ನಾ] ತಾತ,ಅಜ್ಜ. ಜಂಗಮ. ಉಪಾಧ್ಯಾಯ. ಒಡೆಯ, ಯಜಮಾನ.

**ಅರಿ**[ಕ್ರಿ] ಕತ್ತರಿಸು,ಕಡಿದು ಹಾಕು. ತಿಳಿ,ಗ್ರಹಿಸು. ಅಕ್ಕಿ ಮುಂತಾದುವುಗಳನ್ನು ನೀರಿನಲ್ಲಿ ಜಾಲಿಸಿ ಶೋಧಿಸು.[ನಾ] ಹಗೆ,ಶತ್ರು. ಒಂದು ಬಗೆಯ ಕಣ್ಣಿನ ರೋಗ.

**ಅರುಹು**[ಕ್ರಿ] ತಿಳಿಸು,ಹೇಳು.[ನಾ] ತಿಳಿವಳಿಕೆ,ಜ್ಞಾನ.

**ಅರ್ತಿ**[ನಾ] ಪ್ರೀತಿ,ಆಸಕ್ತಿ. ಹರ್ಷ,ಸಂತೋಷ.

**ಅವಸರ**[ನಾ] ಸಮಯ, ಸನ್ನಿವೇಶ. ಅವಕಾಶ. ಹೊತ್ತು,ವೇಳೆ. ಆತುರ. ಮಳೆ.

**ಅವಾಂತರ**[ನಾ] ಸೈನ್ಯ, ಯುದ್ಧ ಮುಂತಾದುವುಗಳಿಂದ ಆಗುವ ತೊಂದರೆ. ಗದ್ದಲ,ಗಡಿಬಿಡಿ.

**ಅಶ್ರುತ**[ನಾ] ವೇದ ವಿರುದ್ಧವಾದುದು. ಅಪರಿಚಿತ.[ಗು] ದು:ಖ;ಕೇಳಿಲ್ಲದ.

**ಅಸುರ**[ನಾ]ರಾಕ್ಷಸ.

**ಅಸ್ತಿಭಾ**[ವಾ]**ರ**[ನಾ]ತಳಹದಿ: ಬುನಾದಿ.

**ಅಳಲು**[ಕ್ರಿ] ದು:ಖಿಸು;ಶೋಕಿಸು.[ನಾ] ದು:ಖ; ಶೋಕ.

**ಅಟ್ಕಿರು**[ಕ್ರಿ] ಪ್ರೀತಿಸು; ವಿಶ್ವಾಸತೋರು. [ನಾ] ಪ್ರೀತಿ;ಅಕ್ಕರೆ

### ಆ

**ಆಗಮ**[ನಾ] ಬರುವುದು; ಸೇರುವುದು. ಪೂರ್ವದಿಂದಲೂ ಬಂದ ಸಂಪ್ರದಾಯದ ಸಿದ್ಧಾಂತ ಗ್ರಂಥ,–ಶಾಸ್ತ್ರ. ದೇವಪೂಜಾತಂತ್ರವನ್ನು ತಿಳಿಸುವ ಶಾಸ್ತ್ರ.

**ಆಗರ**[ನಾ] ಆಧಾರವಾದ ಸ್ಥಳ, ಆಶ್ರಯ, ನೆಲೆ. [ಉಪ್ಪಿನ]ಗಣಿ. ಮನೆ,ವಾಸಸ್ಥಾನ. ಸ್ಥಳ,ಜಾಗ.

ಆಛ್ಛಾದಿತ[ಗು] ಮರೆಮಾಡಿದ,ಮುಚ್ಚಲ್ಪಟ್ಟ..

ಆದರ[ನಾ] ಗೌರವ,ಮರ್ಯಾದೆ. ಆಸಕ್ತಿ. ಪ್ರೀತಿ. ಸತ್ಕಾರ, ಉಪಚಾರ.

ಆನು[ಕ್ರಿ] ಎದುರಿಸು,ಪ್ರತಿಭಟಿಸು. ವಹಿಸು, ಕೈಗೊಳ್ಳು. ಹೊಂದು, ಪಡೆ ಆಶ್ರಯವಾಗು.

ಆಸಕ್ತ[ನಾ] ತತ್ಪರತೆ ಅಥವಾ ಶ್ರದ್ಧೆಯುಳ್ಳ ವ್ಯಕ್ತಿ. [ಗು] ಮಗ್ನವಾದ, ತತ್ಪರವಾದ. ಸ್ಥಿರವಾದ,

ಇ

ಇಂಬು[ನಾ] ಎಡೆ, ಆಶ್ರಯ. ಅಳತೆ,ಮಿತಿ. ಪ್ರೀತಿ. ಸುಖ. ಸಂತೋಷ. ಸೌಕರ್ಯ.

ಇನ[ನಾ] ಸೂರ್ಯ. ಗಂಡ. ಒಡೆಯ.

ಇರಿ [ದೇ][ಕ್ರಿ] ತಿವಿ. ಚುಚ್ಚು. ಕೊಲ್ಲು,

ಇರುಳು [ದೇ][ನಾ] ರಾತ್ರಿ. ಅಜ್ಞಾನ.

ಇಳೆ[ನಾ] ಭೂಮಿ. ಹಸು, ಆಕಳು.

ಇಟಿ[ಕ್ರಿ] ಕೆಳಕ್ಕೆ ಬರು; ಬೀಳು. ಕುಗ್ಗು,ಕುಸಿ, ಸೊರಗು. ಜೋಲು ಬೀಳು.

ಈ

ಈಶ್ವರ [ಸಂ] [ನಾ] ಒಡೆಯ, ಪ್ರಭು. ಶಿವ. ಏಕಾದಶ ರುದ್ರರಲ್ಲಿ ಒಬ್ಬ.

ಉ

ಉತ್ತಮಾಂಗ [ನಾ] ಶ್ರೇಷ್ಠವಾದ ಅಂಗ; ತಲೆ.

ಉತ್ತರೀಯ [ಸಂ] [ನಾ] ಮೇಲು ಹೊದಿಕೆ, ಶಾಲು.

ಉದರ[ನಾ] ಹೊಟ್ಟೆ;ಜಠರ.ಆಹಾರ. ಮಧ್ಯಭಾಗ.

ಉಪಾರ್ಜಿಸು [ಸಂ] [ನಾ] ಸಂಪಾದಿಸು, ಗಳಿಸು.

ಉಯ್[ಕ್ರಿ] ಒಯ್ಯು; ತೆಗೆದುಕೊಂಡುಹೋಗು. ತಡೆದಿಡು; ಹಿಡಿತದಲ್ಲಿಡು; ನಿರ್ಬಂಧಿಸು.

ಉರವಣಿಸು[ಕ್ರಿ] ರಭಸದಿಂದ ಮುಂದೆನುಗ್ಗು. ಆಕ್ರಮಿಸು. ಉತ್ಸಾಹಗೊಳ್ಳು.

ಉರಿ[ಕ್ರಿ] ಜ್ವಲಿಸು. ಸುಡು;ಸುಟ್ಟುಹೋಗು. ತಾಪಉಂಟಾಗು. ಸಂತಾಪಕ್ಕೆ ಗುರಿಯಾಗು;

ಉರುಹು [ದೇ] [ಕ್ರಿ] ಬಾಯಿಯಿಂದ ಗಾಳಿ ಊದು.

ಉರ್ವಿ[ನಾ] ನೆಲ; ಭೂಮಂಡಲ.

ಉಲ್ಕೆ[ನಾ] ಉಲ್ಕ [ಆಕಾಶದಿಂದ ಕೆಳಕ್ಕೆ ಬೀಳುವ ತೇಜಪುಂಜವಾದ ವಸ್ತು. ಉರಿಯುವ ಕೊಳ್ಳಿ, ಆಕಾಶಕಾಯ

ಉಸಿರ್[ಉಸಿರು][ಕ್ರಿ] ಉಸಿರಾಡು. ಮಾತನಾಡು; ಹೇಳು. ಧ್ವನಿಮಾಡು;ಸದ್ದುಮಾಡು. [ನಾ] ಶ್ವಾಸ; ಪ್ರಾಣವಾಯು.

ಋ

ಋಣ[ನಾ] ಸಾಲ. ಹಂಗು.

ಎ

ಎಕ್ಕಡ[ನಾ] ಕೆರವು. ಮೆಟ್ಟು; ಕಾಲ್ಜೋಡು, ಚಪ್ಪಲಿ.

ಎಡೆ[ನಾ] ಸ್ಥಳ. ಅಂತರ. ಅಧಿಕ. ಊಟಕ್ಕೆ ಬಡಿಸಿದ್ದು. ಕಾಣಿಕೆ. ಅವಕಾಶ.

ಎಯ್ದೆ [ಅ] ಚೆನ್ನಾಗಿ. ಪೂರಾ. ತುಂಬಾ.

ಎರೆ[ಧಾ] ಬೇಡು.[ಕ್ರಿ] ಹೊಯ್ಯು. ದಾನಮಾಡು.

ಎವೆ[ಎಮೆ][ನಾ] ಎಮ್ಮೆ. ರೆಪ್ಪೆ. ಬಿಳಿಗೋದಿ.

ಏ

ಏರಿ[ನಾ] ಎತ್ತರ ಪ್ರದೇಶ, ಕಟ್ಟೆ; ಕೆರೆಯ ದಂಡೆ.

ಒ

ಒಡಂಬಡು[ಕ್ರಿ] ಒಪ್ಪು. ಹೊಂದಿಕೆಯಾಗು.

ಒಡಲು[ನಾ] ಶರೀರ; ದೇಹ. ಹೊಟ್ಟೆ..

ಒಳರ್[ರು] [ದೇ] [ಕ್ರಿ] ಕೂಗು, ಅರಚು.

ಕ

ಕಂಪು[ನಾ] ಪರಿಮಳ. ಸಿಹಿತನ.

ಕಜ್ಜ[ನಾ] ಕಾರ್ಯ. ಕೆಲಸ. ಉದ್ಯೋಗ.

ಕಟ್ಟಳೆ [ದೇ] [ನಾ] ನಿಯಮ, ಸರದಿ, ದೇವಸ್ಥಾನದಲ್ಲಿ ನೈವೇದ್ಯದ ಏರ್ಪಾಡು. ಸೇವಾಕಾಣಿಕೆ.

**ಕಟ್ಟೇಕಾಂತ**[ನಾ] ಅತಿ ರಹಸ್ಯ; ಅತಿ ಗುಟ್ಟು..

**ಕಡು**[ವಿ] ಕಟು. ಬಹಳ. ಸ್ಥಿರವಾದ. ಬಿರುಸಾದ. ದೊಡ್ಡ. ಕಡವು–ನದಿ ದಾಟುವ ಸ್ಥಳ.

**ಕಣಿ**[ನಾ] ಗಣಿ. ಭವಿಷ್ಯ ಕಥನ. ಕಟ್ಟು. ಗಂಟು. ಶುಭಾಶುಭಶಕುನ.

**ಕರ**[ನಾ] ಕೈ. ಆನೆಯ ಸೊಂಡಿಲು. ತೆರಿಗೆ. ಕಿರಣ. ಆಲಿಕಲ್ಲು. ಅತಿಶಯ.

**ಕರಂ**[ಅ] ಚೆನ್ನಾಗಿ. ಹೆಚ್ಚಾಗಿ. ಪೂರಾ.

**ಕರುಕ**[ಕರುಕು][ನಾ] ಇದ್ದಲು. ಕಪ್ಪು. ಮಸಿ.

**ಕರುತ್ತು** [ದೇ] [ಕ್ರಿ] ಕೋಪಗೊಂಡು.

**ಕಲಹ**[ನಾ] ಜಗಳ; ಕಾದಾಟ. ವೈಮನಸ್ಸು.

**ಕಸರತ್ತು** [ನಾ] ಕವಾಯಿತು. ಶಕ್ತಿ;ಚಮತ್ಕಾರಗಳ ಪ್ರದರ್ಶನ.

**ಕಳವು** [ನಾ] ನದಿ ದಾಟುವ ಸ್ಥಳ. ಕಳ್ಳತನ; ತುಡುಗು; ಚೌರ್ಯ.

**ಕಳೆ**[ಧಾ] ಕಳೆದುಕೊಳ್ಳು. ಬಿಸಾಡು. ಅಲ್ಲಗಳೆ. ಕಾಂತಿ. ಭಾಗ.

**ಕಾಂತಿ**[ನಾ] ಶೋಭೆ. ಹೊಳಪು, ಚೆಲುವು, ಇಚ್ಛೆ.

**ಕಾಪು**[ನಾ] ರಕ್ಷಣೆ; ಕಾವಲು. ದೃಷ್ಟಿಬೊಟ್ಟು.

**ಕಾಯ**[ನಾ] ಮೈ; ದೇಹ. ಮರದ ಬೊಡ್ಡೆ. ಸಂಘ. ಸಂತೆ. ರಾಜಧಾನಿ. ವಸತಿ;ಮನೆ.

**ಕಾರಕ** [ನಾ] ಮಾಡುವವ. ಒಡೆಯ. ವಿಭಕ್ತಿಯನ್ನು ಹೊಂದಿದ ಪದಗಳು. ಕೊಳ್ಳಿ.

**ಕಾರಕೂನ**[ನಾ]ಲೆಕ್ಕಿಗ; ಬರೆಹಗಾರ; ಗುಮಾಸ್ತ; ಕರಣಿಕ.

**ಕಿಂಕರ**[ನಾ] ಸೇವಕ; ಊಳಿಗದಾಳು. ಕೋಗಿಲೆ.

**ಕಿಡಲ್ನುಡಿ**[ನಾ]ಕೆಟ್ಟನುಡಿ.

**ಕಿಡಿ**[ನಾ]ಕಿಚ್ಚಿನಕಣ; ಬೆಂಕಿಯ ಸಣ್ಣಭಾಗ.

**ಕುಕ್ಕು** [ದೇ] [ಕ್ರಿ] : ಚುಚ್ಚು, ತಿವಿ, ಕುಟ್ಟು. ಕಣ್ಣು ಕೋರೈಸು. ಪಾತ್ರೆ ಮುಂತಾದುವನ್ನು ರಭಸದಿಂದ ಇಡು.

**ಕುಟಿಲ**[ವಿ] ಬಗ್ಗಿದ; ಓರೆಯಾದ. [ನಾ] ಮೋಸ; ಕೈಚಳಕ. ಅನ್ಯಾಯ;ನಕಲಿ.

**ಕುಟೀರ** [ನಾ] ಗುಡಿಸಲು; ಆಶ್ರಮ. ಚಪ್ಪರ.

**ಕುಮಕಿ**[ಗು]ಸಹಾಯಕ.

**ಕುಸುರಿ** [ದೇ] [ನಾ] ಸೂಕ್ಷ್ಮವಾದ, ನಾಜೂಕಿನಿಂದ ಕೂಡಿದ ಆಭರಣ. ಬೆಡಗು ಬಿನ್ನಾಣ ಎಂಜಲು. ಎಳೆಯ ಕಾಯಿ. ಹಣ್ಣಿನ ತಿರುಳು

**ಕುಳಿ**[ನಾ] ತಗ್ಗು; ಹೊಂಡ. ತುಂಡಾಗು. ಕೋಲಾಹಲ.

**ಕೂರ್ಮೆ**[ನಾ]ಸ್ನೇಹ; ನಲ್ಮೆ; ಪ್ರೀತಿ. ಮೋಹ.

**ಕೃತ್ರಿಮ**[ನಾ] ಕೃತಕ. ಮೋಡಿ; ಮಾಟಗಾರಿಕೆ. ದತ್ತುಮಗ.

**ಕೆನ್ನ** [ದೇ] [ನಾ] ಕೆಂಪುಬಣ್ಣ ದುಃಖ, ಕಷ್ಟ

**ಕೆಲ**[ವಿ] ಕೆಲವು; ಸ್ವಲ್ಪ. [ನಾ] ಪಕ್ಕ; ಬದಿ.

**ಕೇಡು** [ದೇ] [ನಾ] ಆಪತ್ತು, ಕೆಡುಕು. ಅಳಿವು,ನಾಶ.

**ಕೈಕೊಳ್ಳು**[ಧಾ] ಆರಂಭಿಸು. ಅಂಗೀಕರಿಸು.

**ಕೈಯಾನು**[ನಾ] ಕೈಯೊಡ್ಡು. ಆದರದಿಂದ ಬರಮಾಡಿಕೊಳ್ಳು. ಅಣಿಯಾಗು. ಸ್ವೀಕರಿಸು.

**ಕೈವಾರ**[ನಾ] ಹೊಗಳಿಕೆ. ವರ್ತುಲವನ್ನು ತೀಡುವ ಭೂಮಿತಿಯ ಒಂದು ಉಪಕರಣ. ಆಯುಧ.

**ಕೊಳ್ಳಿ**[ನಾ]ಉರಿಯುವ ಕಟ್ಟಿಗೆ; ಸೂಟೆ.

**ಕೋಟರ**[ನಾ] ಮರದಪೊಟರೆ. ಪೊಳ್ಳು.

**ಕ್ರಮ**[ನಾ] ಹೋಗುವುದು. ಮುಂದುವರಿಯುವುದು. ರೀತಿ. ನೀತಿ. ನಿಯಮ.

**ಕ್ಷೋಭೆ**[ನಾ]ಚಲನವಲನ. ಆಂದೋಲನ. ಕಲಕುವಿಕೆ. ಕಂಪನ. ಉದ್ವೇಗ. ಅಂಜಿಕೆ.

## ಖ

**ಖಿರ್ದಿ**[ನಾ]ಆಯುವ್ಯಯುಗಳನ್ನು ಬರೆದಿಡುವ ಪುಸ್ತಕ;ಜಮಾಖರ್ಚಿನ ಪುಸ್ತಕ;ಕಿರ್ದಿ.

## ಗ

**ಗಂಧ**[ನಾ]ವಾಸನೆ. ಒಂದು ಜಾತಿಯ ಕಲ್ಲು. ಹೆಮ್ಮೆ. ನೆರೆಯುವ. ಸ್ವಲ್ಪ.

**ಗಡ**[ಅ] ಗಳ. ಕಂಡೆಯಾ. ಅಲ್ಲದೆ. ಸಹಜವಾಗಿ. ನಿಜ. ಬೇಗಬೇಗನೆ.[ನಾ] ಕೋಟೆ. ಒತ್ತೆ. ಕಡ. ಸೀಮೆ. ನಿಶ್ಚಿತ.

**ಗಡಣ**[ನಾ]ಸಮೂಹ;ಗುಂಪು;ರಾಶಿ.

**ಗಡಿ**[ನಾ]ಮೇರೆ. ಸಣ್ಣಕೋಟೆ. ತೊಂದರೆ, ಕಂಬ. ವಾಸ. ಇಕ್ಕೆ. ಗಳಿಗೆ. ಗಡಿಯಾರ.

**ಗದ್ದುಗೆ**[ಗದ್ದಿಗೆ][ನಾ]ಸಿಂಹಾಸನ.ಮಣೆ; ಆಸನ; ಪೀಠ. ಸಮಾಧಿ. ಕಟ್ಟೆ.

**ಗರ**[ನಾ]ಗರ ಗರ ಶಬ್ದ. ಗ್ರಹ. ಗ್ರಹ ನಕ್ಷತ್ರಾದಿಗಳು. ಪಿಶಾಚಿ–ಭೂತ. ನುಂಗುವಿಕೆ. ಕುಡಿಯುವಿಕೆ.

**ಗಹನ**[ವಿ] ಆಶ್ಚರ್ಯಜನಕ. ಆಳವಾದ.[ನಾ] ಅರಣ್ಯ. ಪೊದೆ. ಗುಟ್ಟು.

**ಗಳ**[ನಾ] ಕೊರಳು. ಬಿದಿರ ಕೋಲು. ಬಾವು.[ಅ] ಗಡ. ಕಂಡೆಯಾ;ಅಲ್ಲವೇ.

**ಗಾವುದ** [ನಾ]೧೨ ಮೈಲುಗಳ ದೇಶೀಯ ಅಳತೆ.

**ಗಿರಣಿ**[ನಾ] ಯಂತ್ರಗಳಿಂದ ಸಜ್ಜಿತವಾದ ಕಾರ್ಖಾನೆ. ಯಂತ್ರಶಾಲೆ. ಹಿರಿಯಬೇನೆ.

**ಗ್ರಾಮಿಣಿ** [ಸಂ] [ನಾ] ಹಳ್ಳಿಯ ಮುಖ್ಯಸ್ಥ

**ಗ್ಲಾನ**[ನಾ] ಆಯಾಸ. ಶ್ರಮ. ನೋವು. ತಲ್ಲಣ. ಅವನತಿ

### ಘ

**ಘಟ**[ವಿ]ಹೊಂದುವ. ಭಯಂಕರ.[ನಾ] ಮಣ್ಣಿನ ಪಾತ್ರೆ;ಕೊಡ. ಕೂಟ.ಬಡಿತ. ಆನೆಯ ಹಿಂಡು.

**ಘಟಿ**[ಕಾ] [ಸಂ] [ನಾ] ಗಳಿಗೆ. ಇಪ್ಪತ್ತ ನಾಲ್ಕು ನಿಮಿಷಗಳ ಅವಧಿ.

**ಘನ**[ವಿ] ಶ್ರೇಷ್ಠ. ಗಟ್ಟಿಯಾದ.[ನಾ] ಮೋಡ. ಗುರುತರವಸ್ತು. ಗಡ್ಡೆ. ದೇಹ. ವೇದವನ್ನು ಉಚ್ಚಸ್ವರದಲ್ಲಿ ಹೇಳುವರೀತಿ.

**ಘಾತಕ**[ನಾ] ಘಾತ[ಪೆಟ್ಟು]ಮಾಡುವವ. ವಂಚಕ.

**ಘೋರ**[ವಿ] ಭಯಂಕರ. ಬಲವತ್ತರ. ಶಿವ.

**ಘ್ರಾಣೇಂದ್ರಿಯ**[ನಾ]ಮೂಗು.

### ಚ

**ಚರಣ** [ಸಂ] [ನಾ] ಪಾದ, ನಡೆ, ಸಂಚಾರ, ಆಚರಣೆ, ಸಂಗೀತದಲ್ಲಿ ವರ್ಣ, ಕೀರ್ತನೆಗಳ ಕಡೆಯ ಭಾಗ.

**ಚರಿಗೆ**[ನಾ] ಚಂಬು. ಅನ್ನದಪಾತ್ರೆ. ಹೋಗುವಿಕೆ. ಆಚರಿಸುವಿಕೆ.

**ಚರಿಸು**[ಧಾ] ಹೋಗು. ಅಲೆದಾಡು. ಕೈಕೊಳ್ಳು. ನೋಡು. ಆಚರಿಸು.

**ಚಿಕ್ಕೆ** [ದೇ] [ನಾ] ಚಿಕ್ಕಿ, ತಾರೆ, ನಕ್ಷತ್ರ, ತಿಲಕ

**ಚಿತ್ತ**[ವಿ] ಪರಿಶೀಲಿಸಿದ. ಬಯಸಿದ.[ನಾ] ಮನಸ್ಸು. ಹೃದಯ. ಯೋಜನೆ. ಧ್ಯೇಯ. ಉದ್ದೇಶ.

**ಚಿರ**[ವಿ] ಸ್ಥಿರವಾದ; ಬಹುಕಾಲ ಬಾಳುವ; ಶಾಶ್ವತ.

**ಚೀತ್ಕರಿಸು** [ಚೀತ್ಕಾರ+ಇಸು] [ಕ್ರಿ] ಗಟ್ಟಿಯಾಗಿ ಅರಚು ಆರ್ತನಾದ ಮಾಡು ಸಣ್ಣ ಗುರುತು.

**ಚೋದ್ಯ**[ವಿ] ಆಶ್ಚರ್ಯ;ಸೋಜಿಗ. ಆಕ್ಷೇಪಕಾರಕ

### ಜ

**ಜಟಿಲ** [ಸಂ] [ನಾ] ತೊಡಕು, ಸಮಸ್ಯೆ

**ಜನಪ** [ಸಂ] [ನಾ] ರಾಜ, ಒಡೆಯ, ಜನರನ್ನು ಪಾಲಿಸುವವ.

**ಜಲದ** [ಸಂ] [ನಾ] ತೀವ್ರ ನೀರನ್ನು ನೀಡುದಂತಹ ಮೋಡ. ಒಂದು ವಿಧದ ಗಡ್ಡೆ

**ಜಡ**[ವಿ] ಮಂದ. ಚಟುವಟಿಕೆಯಿಲ್ಲದ. ಮೂಢ. ದಡ್ಡ; ಅಲಸ. [ನಾ] ಪರ್ವತ.

**ಜರ್ಬು**[ಧಾ]ಕಣ್ಸನ್ನೆಯಿಂದ ತಿಳಿಸು. ಗದರಿಸು. ಕೀಳುಮಾಡು.[ನಾ] ಹೆಮ್ಮೆ. ಗದರಿಕೆ.

**ಜಲದ**[ನಾ] ಮುಗಿಲು. ನೀರುಕೊಡುವುದು.

### ತ

**ತಡಿ** [ಸಂ. ತಟೀ] [ನಾ] ದಡ, ತೀರ. ಎಲ್ಲೆ, ಮಿತಿ. ಸಮೀಪ, ಹತ್ತಿರ.

**ತಣಿ**[ಕ್ರಿ] ತೃಪ್ತಿಹೊಂದು; ಸಮಾಧಾನಗೊಳ್ಳು. ಆಯಾಸಹೊಂದು; ಸೋತುಹೋಗು. ತಣ್ಣಗಾಗು; ಆರು.[ನಾ] ತರ್ಪಣ; ತನಿ.

**ತನುಜ**[ತನೂಜ][ನಾ] ಮಗ; ಸುತ. ಮರಿ;ಪೋತ.

**ತಮ** [ನಾ] ಕತ್ತಲೆ. ಮೂರು ಮೂಲಗುಣಗಳಲ್ಲಿ ಒಂದು; ತಮೋಗುಣ. ರಾಹು. ಅಜ್ಞಾನ. ಸಲ್ಲದ ಕಾರ್ಯ; ಪಾಪ.

**ತಮಾಲ**[ನಾ]ಹೊಂಗೆಯ ಮರ. ಕತ್ತಲೆ; ಅಂಧಕಾರ.

**ತವಸಿ**[ನಾ] ತಪಸ್ವಿ; ಋಷಿ. ಒಂದು ಬಗೆಯ ಮರ; ಇಂಗುಳದ ಮರ.

**ತಸ್ಕರ**[ನಾ]ಕಳ್ಳ;ಚೋರ.

**ತಾಂತ್ರಿಕ**[ನಾ] ತಂತ್ರಶಾಸ್ತ್ರಜ್ಞ, ವಿದ್ವಾಂಸ; ಪಂಡಿತ.[ಗು] ವೈಜ್ಞಾನಿಕ ಪ್ರಯೋಗಗಳಿಗೆ ಸಂಬಂಧಿಸಿದ.

**ತಿರಿಕುಲ** [ದೇ] [ನಾ] ಅಲೆಮಾರಿಗಳು, ತಿರುಗಾಡುವವರು.

**ತೀಡು** [ದೇ][ಕ್ರಿ] ಮುಟ್ಟು, ಸ್ಪರ್ಶಿಸು. ಬೀಸು. ಲೇಪಿಸು, ಉಜ್ಜು, ತಿಕ್ಕು, ನೇವರಿಸು, ಹೊಡೆ. ಆರಿಸು, ನಂದಿಸು ಉಂಟಾಗು ಪರಿಷ್ಕರಿಸು, ಸರಿಪಡಿಸು.

**ತುರಂಗ**[ನಾ] ಕುದುರೆ. ಒಂದು ಬಗೆಯ ಚಿತ್ರ ಕಾವ್ಯ. ಸೆರೆಮನೆ;ಜೈಲು.

**ತೃಷೆ:** [ನಾ] ನೀರಡಿಕೆ;ಬಾಯಾರಿಕೆ, ಆಸೆ;ಅಪೇಕ್ಷೆ

**ತೆಬ್ಬು** [ದೇ][ನಾ] ಬಿಲ್ಲಿನ ಹೆದೆ, ನಾರಿ.

**ತೇಜ**[ನಾ] ಹೊಳಪು. ಕದಿರು;ರಶ್ಮಿ. ಬೆಂಕಿ. ರವಿ. ತೀಕ್ಷ್ಣತೆ; ಗೌರವ. ವುನೆ. ಶಕ್ತಿ. ಚಿನ್ನ. [ವ್ಯಾಪಾರದಲ್ಲಿ]ಬೆಲೆಯೇರಿಕೆ;ಉತ್ಕರ್ಷ.

**ತೊತ್ತಳ** (ದೇ)(ನಾ) ನುಗ್ಗುನುರಿ, ಜರ್ಜರಿತವಾದುದು, ರಭಸ. ವೇಗ.

## ದ

**ದನುಜ** [ನಾ] ದೈತ್ಯ, ರಾಕ್ಷಸ

**ದಂಡು**[ನಾ] ಕೋಲು; ದಡಿ, ವೀಣೆ;ತಂಬೂರಿ ಮೊದಲಾದುವುಗಳ ದಂಡ, ವಟು;ಸಂನ್ಯಾಸಿ ಮೊದಲಾದವರು ಹಿಡಿದಿರುವ ಕೋಲು, ಸೈನ್ಯ. ಗುಂಪು; ಸಮೂಹ. ಸೈನ್ಯ ಇರುವ ಸ್ಥಳ.

**ದಾತಾರ** [ನಾ] ಕೊಡುವವನು, ಒಡೆಯ

**ದಿಗ್ಭ್ರಮೆ**[ನಾ]ದಿಕ್ಕುತೋರದಿರುವುದು;ಗಾಬರಿ;ಕಳವಳ.

**ದಿಟ್ಟಿ**[ನಾ] ಕಣ್ಣು. ದೃಷ್ಟಿ. ಕೆಟ್ಟದೃಷ್ಟಿ. ಲಕ್ಷ್ಯ.

**ದೀವಿಗೆ** [ಸಂ–ದೀಪಿಕಾ] [ನಾ] ಸೊಡರು, ದೀಪಿಕೆ.

**ದೂಷಣೆ**[ನಾ] ನಿಂದಿಸುವುದು. ದೋಷಾರೋಪಣೆ.

**ದೃಗುಜಲ**[ನಾ]ಕಣ್ಣೀರು;ಕಂಬನಿ.

**ದೃಷ್ಟಿ[ನಾ]** ಕಣ್ಣಿನನೋಟ. ಕಣ್ಣು. ಆಲೋಚನೆ. ಅರಿವು. ಅಭಿಪ್ರಾಯ.

**ದ್ರುಮ** [ಸಂ] [ನಾ] ಮರ, ವೃಕ್ಷ

**ದ್ವಂದ್ವ[ನಾ]** ಎರಡು;ಜೊತೆ. ಪರಸ್ಪರ ವಿರುದ್ಧ ವಸ್ತುಗಳ ಜೋಡಿ. ಜಗಳ. ಸಂದೇಹ. ಗುಟ್ಟು. ಒಂದು ಸಮಾಸದ ಹೆಸರು. ಬೇರೆಬೇರೆ ಎಂಬ ಭಾವ; ದ್ವೈತಭಾವ.

## ಧ

**ಧಡೂತಿ**[ನಾ] ಗಟ್ಟಿಮುಟ್ಟಾಗಿರುವುದು; ದಷ್ಟಪುಷ್ಟ; ದೃಢಕಾಯ.

**ಧೃತಿ**[ನಾ] ಧೈರ್ಯ; ಕೆಚ್ಚು. ತಾಳ್ಮೆ. ಸ್ಥಿರವಾಗಿರುವುದು. ತಾಳುವಿಕೆ.

## ನ

**ನಂದನ**[ನಾ] ಆನಂದ. ಮಗ. ಇಂದ್ರನ ತೋಟ [ಉದ್ಯಾನವನ] ತೋಟ. ಅರುವತ್ತು ಸಂವತ್ಸರಗಳಲ್ಲಿ ೨೬ನೆಯದು.

**ನಚ್ಚು** [ಕ್ರಿ] ನಂಬು. ಮೆಚ್ಚು; ಬಯಸು. [ನಾ] ವಿಶ್ವಾಸ. ಪ್ರೀತಿ. ಮೋಹ. ಬಯಕೆ. ಗೀಳು; ಹಂಬಲ.

**ನಟ್ಟಡವಿ**[ನಾ]ಕಾಡಿನ ಮಧ್ಯಭಾಗ.

**ನಣ್ಪು**[ನಾ] ನಂಟು; ಬಾಂಧವ್ಯ. ಗೆಳತನ. ನಂಬಿಕೆ; ಪ್ರೀತಿ.

**ನರೆ** [ದೇ][ಕ್ರಿ] ಬಿಳಿಬಣ್ಣ. ಕೂದಲು ಬೆಳ್ಳಗಾಗು. ಮುಪ್ಪಾಗು

**ನಲುಗು** [ದೇ][ಕ್ರಿ] ಸುಕ್ಕುಸುಕ್ಕಾಗು, ಮುದುಡು. ಕೊರಗು, ಸೊರಗು. ಅಲ್ಲಾಡು, ಒಯ್ಯಾರಮಾಡು.

**ನಲ್ಮೆ** [ನಾ] ಪ್ರೀತಿ. ಅನುಗ್ರಹ. ಕ್ಷೇಮ. ಒಳಿತು.

**ನಾಡು** [ದೇ][ನಾ] ಜನವಸತಿಯುಳ್ಳ ಪ್ರದೇಶ.

**ನಿರ್ವಾಹ** [ನಾ] ನಿವಾರಣೋಪಾಯ. ವಾಸದ ಏರ್ಪಾಟು. ಬೇರೆಯದಾರಿ. ಬದುಕು, ಕೊನೆ.

**ನಿಷ್ಠೆ** [ನಾ] ಭಕ್ತಿ; ಏಕಚಿತ್ತ; ಸ್ಥಿತಿ. ಕ್ರಮತಪ್ಪದ ಆಚಾರ ವಿಚಾರ. ಶ್ರದ್ಧೆ; ನಂಬಿಕೆ. ಆಸಕ್ತಿ; ಆಧಾರ.

**ನೀರದ** [ನಾ] ಮೋಡ. ಹಲ್ಲಿಲ್ಲದುದು.

**ನಿರ್ವಹಿಸು** [ಸಂ][ಕ್ರಿ] ಪೂರೈಸು, ನೆರವೇರಿಸು ಜವಾಬ್ದಾರಿಯನ್ನು ವಹಿಸು. ಅನುಭವಿಸು ನಾಶಮಾಡು. ಸಾಗು. ಗೆಲ್ಲು. ಬದುಕು. ತಾಳು, ಪಡೆ.

**ನೂಕು** [ದೇ][ಕ್ರಿ] ತಳ್ಳು. ಸಮಯವನ್ನು ಕಳೆ. ಆಕ್ರಮಣ ಮಾಡು. ತ್ಯಜಿಸು. ಮುಂದುವರಿ. ಚಿಮ್ಮು, ಹೊರಸೂಸು.

**ನೃಪ** [ಸಂ.][ನಾ] ರಾಜ, ದೊರೆ.

**ನೆಗಳ್** [ಕ್ರಿ] ಇರು. ತೊಡಗು. ಆಚರಿಸು. ವ್ಯವಹರಿಸು; ವರ್ತಿಸು. ಲಭಿಸು. ಪ್ರಸಿದ್ಧಿಪಡೆ. [ನಾ] ಮೊಸಳೆ; ನಕ್ರ.

**ನೆಗಳ್**[ಳು][ದೇ][ಕ್ರಿ] ಮಾಡು. ಆಚರಿಸು. ಉಂಟಾಗು ಸಂಭವಿಸು. ಪ್ರಸಿದ್ಧಪಡೆ. ಪ್ರಸಿದ್ಧಿಗೊಳಿಸು. [ನಾ]ಮೊಸಳೆ.

**ನಚ್ಚು** [ಕ್ರಿ] ನಂಬು. [ನಾ] ನಂಬಿಕೆ; ವಿಶ್ವಾಸ.

**ನೆಟ್ಟಗೆ** [ಅ] ನೇರವಾಗಿ. ಅಣಿಯಾಗಿ. ಚೆನ್ನಾಗಿ.

**ನೆತ್ತಿ** [ನಾ] ತಲೆಯ ಮಧ್ಯಭಾಗ; ನಡುದಲೆ. ಹಣೆ; ನೊಸಲು. ತುದಿ; ಶಿಖರ.

**ನೆರವಿ**[ನಾ] ಗುಂಪು. ಅತಿಶಯತೆ. ಬೀಗರೂಟ.

**ನೆರವು** [ನಾ] ಸಹಾಯ. ಹಾಲಿಗೆ ಹಾಕುವ ಹೆಪ್ಪು. ಸಂಪೂರ್ಣತೆ.

**ನೇತ್ರ** [ಸಂ] [ನಾ] ಕಣ್ಣು. ಕಡೆಗೋಲಿನಹಗ್ಗ. ಒಂದು ಬಗೆಯ ಬಟ್ಟೆ. ಅಡಿಕೆಯ ಮರ. ಎರಡು ಎಂಬ ಸಂಖ್ಯೆಯ ಸಂಕೇತ.

## ಪ

**ಪಂಚೇಂದ್ರಿಯ**[ನಾ] ಕಣ್ಣು; ಕಿವಿ; ಮೂಗು, ನಾಲಗೆ, ಚರ್ಮ ಎಂಬ ಐದು ಇಂದ್ರಿಯಗಳು.

**ಪಂಜಾ**[ನಾ] ಪಂಜ. ಮೊಹರಂ ಸಂದರ್ಭದಲ್ಲಿ ಮುಸ್ಲಿಮರು ಪೂಜಿಸುವ ಲೋಹದ ಹಸ್ತಗಳು.

**ಪಗೆ** [ಕ್ರಿ] ದ್ವೇಷಿಸು; ವಿರೋಧಿಸು. [ನಾ] ದ್ವೇಷ; ಹಗೆತನ. ಶತ್ರು; ವೈರಿ.

**ಪಚ್ಚಿ** [ನಾ] ಪಿತ್ತಕೋಶ. ಗೇಲಿ.

**ಪಚ್ಚು** [ಕ್ರಿ] ಪಾಲುಮಾಡು. ಪಿಸುಮಾತನಾಡು; ಗುಟ್ಟಾಗಿ ಹೇಳು. ಚಾಡಿ ಹೇಳು. ಸೇರಿಸು, ಬಳಿದುಕೊಳ್ಳು. [ನಾ] ಕಿವಿಮಾತು. ಬೆಸುಗೆ. ಗುಳಿ; ತಗ್ಗು. ಭಾಗ; ಪಾಲು.

**ಪತ್ತೆ** [ನಾ] ಗುರುತು; ಸುಳಿವು; ಚಿಹ್ನೆ. ವಿಳಾಸ.

**ಪಥ** [ನಾ] ದಾರಿ; ಮಾರ್ಗ; ಹಾದಿ.

**ಪರಮ** [ನಾ] ಶ್ರೇಷ್ಠ. ಹೆಚ್ಚು. ಮಿಗಿಲು. (ಅ) ಹೆಚ್ಚಾಗಿ. ವಿಶೇಷವಾಗಿ.

**ಪರಸು** [ದೇ] [ಕ್ರಿ] ಹರಸು, ಆಶೀರ್ವದಿಸು.

**ಪರಾಕಾಷ್ಠೆ** [ಸಂ] [ನಾ] ತುತ್ತ ತುದಿ, ಪರಮಾವಧಿ.

**ಪರಿಧಿ** [ಸಂ] [ನಾ] ಸುತ್ತುಗಟ್ಟಿರುವ ಆವರಣಗೋಡೆ. ಸೂರ್ಯಚಂದ್ರರ ಸುತ್ತು ಇರುವ ಪ್ರಭಾ ಮಂಡಲ. ವೃತ್ತ, ಮಂಡಲ, ದಿಗಂತ. ಮರ, ವೃಕ್ಷ. ನೀರು, ಜಲ. [ಗಣಿತದಲ್ಲಿ] ಸುತ್ತಳತೆ.

**ಪಲ್ಲವಿ** [ಸಂ] [ನಾ]ಹಾಡಿನ ಆರಂಭದಲ್ಲಿದ್ದು ಪ್ರತಿಚರಣ ಆದ ಕೂಡಲೆ ಪುನರಾವರ್ತನೆಗೊಳ್ಳುವ ಭಾಗ. ಪುನಃ ಪುನಃ ಹೇಳುವ ಮಾತು.

**ಪವನ** [ಸಂ] [ನಾ] ವಾಯು, ಗಾಳಿ. ಉಸಿರು, ಶ್ವಾಸ. ವಾಯುದೇವತೆ.

**ಪಸುರು** [ದೇ] [ನಾ] ಹಸುರು

**ಪಾರ್** [ದೇ] [ಕ್ರಿ] ನಿರೀಕ್ಷಿಸು. ಬಯಸು. ವಿಚಾರಮಾಡು.

**ಪಾಷಂಡ** [ಸಂ] [ನಾ] ಸಂಪ್ರದಾಯ ವಿರೋಧಿಸುವ, ನಾಸ್ತಿಕ. ಕಲ್ಲು, ಶಿಲೆ. ಮಣಿ, ರತ್ನ. ಒಂದು ಬಗೆಯ ವಿಷ

**ಪಿತೃ** [ಸಂ] [ನಾ] ತಂದೆ. ಪೂರ್ವಜ. ಸ್ವರ್ಗಸ್ಥನಾದ ಹಿರಿಯ.

**ಪುದು** [ನಾ] ಗುಂಪು. ಸೇರುವಿಕೆ ನಂಟು, ಸಹವಾಸ. ದತ್ತಿಯಾಗಿ ಬಂದ ಹಣ. ಸಮ, ಸಾಟಿ. ಹೊಂದಿಕೊಳ್ಳುವ ವ್ಯಕ್ತಿ. (ಸುಖ, ರಾಜ್ಯ ಮುಂತಾದುವುಗಳ) ಪಾಲು, ವಿಭಾಗ, ಹಿಸ್ಸೆ. ಪ್ರಭಾವ.

**ಪುಯ್ಯಲಿಡು** [ಕ್ರಿ] ಮೊರೆಯಿಡು, ಗೋಳಿಡು. ಅರಚು, ಗದ್ದಲಮಾಡು.

**ಪುಳ್ಳಿ** [ನಾ] ಪುಡಿಸೌದೆ, ಮರದಿಂದ ಉದುರಿದ ಚಿಕ್ಕಚಿಕ್ಕ ಒಣಕಡ್ಡಿ. ಕಟ್ಟಿಗೆ, ಉರುವಲ, ಸೌದೆ. ಹೀನವಾದುದು, ಕ್ಷುದ್ರವಾದುದು.

**ಪೂಳ್**[ಕ್ರಿ] ಹೂಳು. ತಗ್ಗು, ಕುಳಿ, ಬಾವಿ ಮುಂತಾದುವುಗಳನ್ನು ಕಲ್ಲು ಮಣ್ಣು ಮುಂತಾದುವುಗಳಿಂದ ಮುಚ್ಚುವುದು. ಮುಳುಗಿಸು. ಕವಿಯು. ಮುಚ್ಚು. ಮರೆತುಹೋಗು.

**ಪೃಥ್ವಿ** [ಸಂ] [ನಾ] ಭೂಮಿ.

**ಫಲಕ** [ಸಂ] [ನಾ] ಲೋಹ, ಗಾಜು, ಮರ ಮುಂತಾದುವುಗಳ ತೆಳುವಾದ ಹಾಳೆ, ಹಲಗೆ. ಹರಿಗೆ, ಗುರಾಣಿ. ಹಣ್ಣು.

**ಪೆರೆ** [ನಾ]ಚಂದ್ರ. ಅರ್ಧಚಂದ್ರ. ಹಾವಿನ ಪೊರೆ.

**ಪೆರ್ಮೆ** [ನಾ] ಹೆಮ್ಮೆ, ಹಿರಿಮೆ. ಗರ್ವ, ಅಹಂಕಾರ.

**ಪೆರರ್** ಬೇರೆಯವರು. ಅನ್ಯರು.

**ಪೊಗಳು** (ಪೊಗಳ್) [ಕ್ರಿ] ಕೊಂಡಾಡು, ಬಣ್ಣಿಸು.

**ಪೊನ್ನು** [ನಾ] ಗದ್ಯಾಣ. ಧನ. ಹೊಂಬಣ್ಣ. ಹೊನ್ನು

**ಪೊಳ್ತು** [ನಾ] ಹೊತ್ತು, ಸಮಯ, ಕಾಲ. ನೇಸರು, ಸೂರ್ಯ. ಹೆರಿಗೆಯ ಸಮಯ.

**ಪ್ರಕರ** [ನಾ] ಗುಂಪು, ಸಮೂಹ.

**ಪ್ರಭ** [ವಿ] ಸಮಾನವಾದ, ಹೋಲಿಕೆಯುಳ್ಳ. [ನಾ] ಕಾಂತಿ, ಬೆಳಕು.

## ಬ

**ಬಂಚಿಸು** [ಕ್ರಿ] ಮೋಸಮಾಡು, ವಂಚಿಸು. ತಪ್ಪಿಸು.

**ಬಡಬಾ** [ಸಂ] [ನಾ] ಹೆಣ್ಣು ಕುದುರೆ.

**ಬಡವಾ ಮುಖಾಗ್ನಿ** [ಸಂ] [ನಾ] ಸಮುದ್ರದೊಳಗೆ ಕುದುರೆಯ ಮುಖದಿಂದ ಹೊರಟ ಬೆಂಕಿ.

**ಬವರ** [ನಾ] ಕಾಳಗ. ಜಗಳ. ಸಂಕಟ, ತೊಂದರೆ, ಭ್ರಮರ.

**ಬಸ್ತಿ** [ನಾ] ಬಸದಿ, ಜೈನದೇವಾಲಯ

**ಬಹೆನು** [ದೇ] [ಕ್ರಿ] ಬರುತ್ತೇನೆ.

**ಬಾಯ್** [ನಾ] ಬಾಯಿ. ಪಾತ್ರೆ, ಚೀಲ ಮೊದಲಾದುವುಗಳ ತೆರೆಯುವ ಭಾಗ. ಚೂರಿ, ಕತ್ತಿ ಮೊದಲಾದವುಗಳ ಅಂಚು. ಮಾತು, ನುಡಿ.

**ಬಾಯಾರ್ದು** [ಬಾಯಾರು] [ಕ್ರಿ] ಬಾಯಿ ಒಣಗಿ. ಹಂಬಲಿಸು ಗಾಬರಿಯಾಗು.

**ಬಳಿ** [ದೇ] [ಅ] ಅನಂತರ, ತರುವಾಯ.

**ಬಿನ್ನಹ** [ಸಂ. ವಿಜ್ಞಾಪನಾ] [ನಾ] ಅರಿಕೆ, ವಿನಂತಿ.

**ಬೀಯ** [ನಾ] ತೌಡನ್ನು ತೆಗೆದ ಅಕ್ಕಿ.ಆಹಾರ. ವ್ಯಯ, ಹಾಳು, ನಷ್ಟ.

**ಬೆಸಕೈ** [ದೇ] [ಕ್ರಿ] ಹೇಳು.

**ಬೆರಗು** [ನಾ] ಆಶ್ಚರ್ಯ. ಮೂರ್ಛೆರೋಗ. ವೇಗ. ಉದ್ಧಟತನ. ಉಪಾಯ. ಕೌಶಲ, ಚಾತುರ್ಯ.

**ಬೇಗೆ** [ನಾ] ಬೆಂಕಿ. ಉರಿ. ತಾಪ. ಸಂಕಟ, ದು:ಖ

## ಭ

**ಭಾನು** [ಸಂ] [ನಾ] ಸೂರ್ಯ. ಹೊಳಪು, ಪ್ರಕಾಶ ರಶ್ಮಿ. ರಾಜ.

**ಭಾಸ** [ನಾ] ಹೊಳಪು, ಕಾಂತಿ. ಮನಸ್ಸಿಗೆ ತೋರು. ಹದ್ದು. ಒಬ್ಬ ಸುಪ್ರಸಿದ್ಧ ಸಂಸ್ಕೃತ ನಾಟಕಗಾರ.

**ಭೃಂಗ** [ನಾ] ತುಂಬಿ. ಒಂದು ಬಗೆಯ ಹಕ್ಕಿ. ಕಾಗೆ ಬಂಗಾರ.

**ಭೇದ**[ನಾ] ಬಿರುಕು. ಅಂತರ. ಚತುರೋಪಾಯಗಳಲ್ಲಿ ಒಂದು.

## ಮ

**ಮತ್ತು** [ನಾ] ಮದ, ಅಮಲು, ಸೊಕ್ಕು. [ಅ] ಅಲ್ಲದೆ, ಜೊತೆಗೆ.

**ಮದಾಂಧ** [ನಾ]ಗರ್ವದಿಂದ ವಿವೇಕವನ್ನು ಕಳೆದುಕೊಂಡವನು.

**ಮಧುಪರ್ಕ** [ನಾ] ಮೊಸರು, ತುಪ್ಪ, ನೀರು, ಜೇನುತುಪ್ಪ, ಸಕ್ಕರೆ–ಈ ಐದರ ಮಿಶ್ರಣ.

**ಮನದನ್ನ** [ನಾ] ಪ್ರಿಯ, ಇನಿಯ, ಗಂಡ.

**ಮನ್ವಂತರ** [ನಾ] ಪುರಾಣಗಳಲ್ಲಿ ಹೇಳಿರುವ ಹದಿನಾಲ್ಕು ಮನುಗಳಲ್ಲಿ. ಪ್ರತಿಯೊಬ್ಬ ಮನುವಿನ ಆಳ್ವಿಕೆಯ ಕಾಲ. ಪರಿವರ್ತನೆಯ ಕಾಲ, ಹೊಸಯುಗ.

**ಮಸಲತ್ತು** [ಅರ–ಮಸಲಹತ್] [ನಾ] ಒಳಸಂಚು, ಪಿತೂರಿ, ಹಂಚಿಕೆ.

**ಮಹಾ** [ನಾ] ದೊಡ್ಡದು, ಮಹತ್ವವಾದುದು, ಶ್ರೇಷ್ಠವಾದ.

**ಮಾರ್ಕೊಳ್** [ಕ್ರಿ] ಎದುರಾಗು ಪ್ರತಿಭಟಿಸು ಆಕ್ಷೇಪಿಸು.

**ಮಿಗು** [ದೇ][ಕ್ರಿ] ಹೆಚ್ಚಾಗು. ಶ್ರೇಷ್ಠವಾಗು. ಮೀರು. ದಾಟು. ತಿರಸ್ಕರಿಸು. ಸೋಲಿಸು.

**ಮುಕ್ಕಿ** [ನಾ] ಮೂರ್ಖಹೆಂಗಸು. ದಡ್ಡಿ.

**ಮುಕ್ಕು** [ಕ್ರಿ] ಗಬಗಬನೆ ತಿನ್ನು, ನಾಶಮಾಡು, [ನಾ] ತುಂಡು, ಅಹಂಕಾರ, ರಂಧ್ರ.

**ಮುಕ್ತಕಂಠ** [ನಾ] ಸಂಕೋಚವಿಲ್ಲದೆ ನೇರವಾಗಿ ಹೇಳುವ.

**ಮುತ್ತರ್** [ದೇ][ಕ್ರಿ] ಮುದುಕರು ಅಜ್ಜ, ತಾತ ಹಿರಿಯರು.

**ಮುನಿ** [ಕ್ರಿ] ಸಿಟ್ಟಾಗು, ಬೇಸರಗೊಳ್ಳು, [ನಾ] ತಪಸ್ವಿ, ಋಷಿ.

**ಮಂಡಳ** [ಲ] [ಸಂ] [ನಾ] ವರ್ತುಲಾಕಾರವಾದುದು ದುಂಡಾದ ವಸ್ತು. ಒಂದು ಬಗೆಯ ಹಾವು. ಗುಂಪು. ನಾಡು. ಯುದ್ಧದ ಒಂದು ಗತಿ.

## ಯ

**ಯತಿ** [ಸಂ] [ನಾ] ಇಂದ್ರಿಯ ನಿಗ್ರಹ ಮಾಡಿದವ ಯೋಗಿ, ಪದ್ಯಗಳನ್ನು ಓದುವಾಗ ಅರ್ಥ ಕೆಡದಂತೆ ನಿಲ್ಲಿಸಬೇಕಾದ ನಿಯತ ಸ್ಥಳ.

## ರ

**ರಜ** [ನಾ] ಧೂಳು, ಪುಡಿ, ಪರಾಗ, ಕೆಂಪುಬಣ್ಣ. ರಜೆ.

**ರಣ**[ನಾ] ಯುದ್ಧ, ಹುಣ್ಣು, ಹಡಗಿನ ಒಂದು ಭಾಗ.

**ರವಿ** [ನಾ] ಸೂರ್ಯ, ನೇಸರು, ಬೆಟ್ಟ, ಪರ್ವತ.

**ರವಿಸುತ** [ನಾ] ಸೂರ್ಯನ ಮಗ, ಕರ್ಣ, ಸುಗ್ರೀವ, ಶನಿ, ಯಮ, ವಾಲಿ.

**ರಾಗ** [ನಾ] ಕೆಂಪು ಬಣ್ಣ, ಒಲುಮೆ, ಸಂಗೀತದ ರಾಗ.

**ರಾಜೀವ** [ನಾ] ಕಮಲ, ಒಂದು ಬಗೆಯ ಮೀನು, ನೀರು, ಜಲ.

## ಲ

**ಲಾಂಛನ** [ನಾ] ಗುರುತು, ಚಿಹ್ನೆ, ಕಳಂಕ ಅಪಕೀರ್ತಿ.

**ಲೇಸು** [ನಾ] ಹಿತವಾದುದು, ಮಂಗಳಕರವಾದುದು, ಶುಭಕಾರ್ಯ.

## ವ

**ವಾಜಿ**[ನಾ] ಕುದುರೆ, ಬಾಣ, ಪಕ್ಷಿ, ಹಗೆ, ಶತ್ರು.

**ವಾಸಿ**[ನಾ] ಪ್ರತಿಜ್ಞೆ, ಸ್ಪರ್ಧೆ, ಛಲ, ಕೀರ್ತಿ, ಗುಣಮಟ್ಟ.

**ವಿಟಪಿ** [ನಾ] ಕೊಂಬೆಗಳುಳ್ಳದ್ದು, ಮರ, ಅತ್ತಿಮರ.

**ವಿಜಯತೇ** [ಸಂ] [ನಾ] ಗೆಲುವಾಗಲಿ.

**ವಿಲಾತಿ** [ಪಾರ, ಹಿಂ, ಮರಾ – ವಿಲಾಯತ್] [ನಾ] ವಿದೇಶ, ಇಂಗ್ಲೆಂಡ್ ಮೊದಲಾದ ಅನ್ಯದೇಶ

**ವಿವೇಕ** [ಸಂ] [ನಾ]ಯುಕ್ತಾಯುಕ್ತ ವಿಚಾರ ವಿವೇಚನೆ, ವಿಮರ್ಶೆ. ಜ್ಞಾನ.

**ವ್ಯವಹಿತ** [ಗು] ಮುಚ್ಚಲ್ಪಟ್ಟ, ಮರೆಮಡಿದ.

**ಶ**

**ಶಾಸನವ ನಡು** [ಸಂ] [ಕ್ರಿ] ಅಪ್ಪಣೆಮಾಡು.

**ಶಿತಿಕಂಠ**[ನಾ] ಕಪ್ಪಾದ ಕೊರಳುಳ್ಳವನು, ಶಿವ ನವಿಲು.

**ಶೌರಿ**[ನಾ] ಶೂರಸೇನನ ವಂಶದವನು ಕೃಷ್ಣ, ನವಗ್ರಹಗಳಲ್ಲಿ ಒಂದು, ಶನಿ.

**ಶ್ರವಣ**[ನಾ] ಕೇಳುವಿಕೆ, ಕಿವಿ, ಜೈನ ಸಂನ್ಯಾಸಿ.

**ಸ**

**ಸಮಯಿ** [ಸಂ–ಸಮಯಿನ್] [ನಾ] ಒಂದು ಮತ ಯಾ ಸಿದ್ಧಾಂತಕ್ಕೆ ಸೇರಿದ ವ್ಯಾಪ್ತಿ; ಒಂದು ನಿರ್ದಿಷ್ಟ ಸಿದ್ಧಾಂತವನ್ನು ಅನುಸರಿಸುವವ.

**ಸಲೆ** [ದೇ[ನಾ] ವಿಸ್ತೀರ್ಣ, ಕ್ಷೇತ್ರಫಲ [ಅ] ಒಂದೇಸವನೆ, ಸರಿಯಾಗಿ, ಸಂಪೂರ್ಣವಾಗಿ, ನಿಜವಾಗಿ.

**ಸಾವಂತ** [ಸಂ] [ನಾ] ಒಬ್ಬ ರಾಜನ ಅಧೀನದಲ್ಲಿದ್ದು ಕಪ್ಪ ಕಾಣಿಕೆಗಳನ್ನು ಒಪ್ಪಿಸುವ ಆಶ್ರಿತ ರಾಜ, ಮಾಂಡಲಿಕ.

**ಸೆಕ್ಕು** [ದೇ] [ಕ್ರಿ] ಒಳಸೇರಿಸು. ನೆಡು, ಜೋಡಿಸು. ಹಿಡಿದೆಳೆ [ನಾ] ಒಳ ಸೇರುವಿಕೆ ಕುಗ್ಗುವಿಕೆ.

**ಸೊದೆ** [ಸಂ–ಸುಧಾ] [ನಾ] ಅಮೃತ. ಹಾಲು. ಸುಣ್ಣ, ಗಾರೆ, ನುಚ್ಚು ಮುಂತಾದ ಲೇಪನ ವಸ್ತು.

**ಸಂಕರ** [ನಾ] ಶಿವ, ಕಲಬೆರಕೆ, ಕಸ, ತಿಪ್ಪೆ.

**ಸಮನಿಸು** [ಕ್ರಿ] ಘಟಿಸು, ಉಂಟುಮಾಡು, ಪಡೆ.

**ಸೈದ** [ನಾ] ಸರಳ ಮನುಷ್ಯ, ಪ್ರಾಮಾಣಿಕ.

**ಸ್ಥೈರ್ಯ** [ನಾ] ಮನಸ್ಸಿನ ಗಟ್ಟಿತನ, ಮನೋದಾರ್ಢ್ಯ.

**ಹ**

**ಹಗೆ** [ಕ್ರಿ] ದ್ವೇಷ, ಶತ್ರು, ಧಾನ್ಯಗಳನ್ನು ತುಂಬಲು ನೆಲದಲ್ಲಿ ಮಾಡಿರುವ ಕುಳಿ, ಹಗೇವು.

**ಹರಣ** [ನಾ] ಜೀವ, ಪ್ರಾಣ, ಕಳ್ಳತನ, ನಾಶಗೊಳಿಸು.

**ಹವಣು** [ನಾ] ಕಟ್ಟಳೆ, ನಿಯಮ ಸಮಾನ, ಕ್ರಮ, ನೀತಿ.

**ಹಸ್ತ ಸಾಮುದ್ರಿಕ** [ಸಂ] [ನಾ] ಅಂಗೈ ರೇಖೆಗಳ ಆಧಾರದ ಮೇಲೆ ವ್ಯಕ್ತಿಯ ಭವಿಷ್ಯವನ್ನು ಹೇಳುವ ಶಾಸ್ತ್ರ.

**ಹಿಂಗು** [ಸಂ] [ನಾ] ಒಂದು ಬಗೆಯ ಸಸ್ಯ ಮತ್ತು ಅದರ ಹಾಲಿನಿಂದ ತಯಾರಾಗುವ [ಅಡುಗೆ] ಮತ್ತು ಔಷಧಿಗಳಿಗೆ ಬಳಕೆಯಾಗುವ ಒಂದು ಪದಾರ್ಥ, ಇಂಗು.

**ಹೊಗೆದೋರು** [ದೇ–ಹೊಗೆಂಯಾಡು] [ಕ್ರಿ] ಹೊಗೆಯನ್ನು ಸೂಸು. ಕೋಪ, ದ್ವೇಷ ಮುಂತಾದುವು ಒಳಗೊಳಗೇ ಹೆಚ್ಚಾಗು.

**ಹೊದರು** [ದೇ] [ನಾ] ಪೊದೆ. ತೊಡಕು, ತೊಂದರೆ ಪೊಟರೆ. ಕುಳಿ. ಬಿರುಕು, ಭಿನ್ನಾಭಿಪ್ರಾಯ.

**ಹೊಯ್ದಾಡು** [ದೇ–ಪೊಯ್] [ಕ್ರಿ]ಹೊಡೆ. ಕಡಿ. ಬಡಿದಾಡು.

* * * * *